ನಿಯಮವಿರಬೇಕು. ಆದ್ದರಿಂದಲೇ ಆ ಸಂನ್ಯಾಸಿ ಹೀಗೆ ಮಾಡಿದ್ದಾನೆ ' ಎಂದು ಆಲೋಚಿಸುತ್ತಾ ಅಲ್ಲಲ್ಲಿ ಕುಳಿತು, ಮರಳಿನಿಂದ ಶಿವಲಿಂಗ ಮಾಡಿ, ಪೂಜೆ ಮಾಡಿ ಗಂಗಾ ಸ್ನಾನಕ್ಕೆ ತೆರಳಿದರು.

ಸ್ನಾನಾದಿ ಕಾರ್ಯಗಳನ್ನು ಮುಗಿಸಿ ಕೇಶವನು ತೀರಕ್ಕೆ ಮರಳಿದ. ಅಲ್ಲಿ ನೋಡುತ್ತಾನೆ – ಸುತ್ತಲೂ ನೂರಾರು ಶಿವಲಿಂಗಗಳು ! ತನ್ನ ಶಿವಲಿಂಗವನ್ನೂ, ಅದರ ಕೆಳಗಿರುವ ತಾಮ್ರದ ಬಿಂದಿಗೆಯನ್ನೂ ಎಷ್ಟು ಹುಡುಕಿದರೂ ಗುರುತಿಸಲು ಸಾಧ್ಯವಾಗಲಿಲ್ಲ. 'ಒಂದೊಂದು ಶಿವಲಿಂಗವನ್ನೂ ಒಡೆದು, ತಾಮ್ರದ ಬಿಂದಿಗೆ ಇದೆಯೋ ಇಲ್ಲವೋ ಎಂದು ನೋಡಲೇನೋ ಸಾಧ್ಯ. ಆದರದು ತುಂಬ ಕಷ್ಟಸಾಧ್ಯವಾದುದು' ಎಂದು ತನ್ನ ದುಃಸ್ಥಿತಿಯನ್ನು ನೆನೆಸಿಕೊಂಡು ಹೀಗೊಂದು ಶ್ಲೋಕವನ್ನು ಹೇಳಿದನು.

**''ಗತಾನುಗತಿಕೋ ಲೋಕೋ ನ ಲೋಕಃ ಪಾರಮಾರ್ಥಿಕಃ ।**
**ತೀರೇ ಸೈಕತಲಿಂಗೇನ ನಷ್ಟಂ ಮೇ ತಾಮ್ರಭಾಜನಮ್ ॥''**

(ಒಬ್ಬರು ಮಾಡಿದಂತೆಯೇ ಮಾಡುವವರು ಎಲ್ಲರೂ, ಯಾರೂ ಮೂಲ ಕಾರಣವನ್ನು ಅರಿಯ ಬಯಸುವುದಿಲ್ಲ. ಗಂಗಾತೀರದಲ್ಲಿ ಮರಳಿನ ಲಿಂಗದ ಕಾರಣದಿಂದ ನನ್ನ ತಾಮ್ರ ಬಿಂದಿಗೆಯು ಕಳೆದುಹೋಯಿತು).



# 8. भवितव्यता बलवती

तिलकपुरी नाम नगरी। तत्र भरतो नाम कश्चन अरोगो युवा भार्यया समं निवसति स्म। स निर्धनः कुटुम्बं दुःखेन पालयति स्म। जीविकायै कापि वृत्तिर्न लब्धा। कदाचित् तस्य पत्नी तमब्रवीत् - "नाथ! अद्यावधि वृत्तिर्न लब्धेति भवान् अतिदुःखम् अनुभवति। परं गृहान्तरेव कालं नयति। कथं वृत्तिः लब्धुं शक्यते ? अतो बहिः गत्वा वृत्त्यन्वेषणं करोतु।" पत्नीवचनानुसारेण भरतो गृहात् निर्गतवान्।

किञ्चिद्दूरं गतः, मार्गमध्ये वृक्षस्याधः उपविष्टं कञ्चित् संन्यासिनम् अपश्यत्। स्वसमीपमागतं तं संन्यासी अपृच्छत्- "त्वम् अतीव दुःखी भासि। किं ते दुःखस्य कारणम्? वक्तुं शक्यं वा?" इति। भरतः तस्मै वृत्तेरलाभं स्वदुःखहेतुम् अकथयत्।

मुनिः क्षणं रोमन्थयन् तम् उवाच- "वत्स, त्वया त्रीणि कार्याणि कर्तव्यानि। एकं - यः तव साहाय्यं याचते, आवश्यकं तदनुपदं कुरु। द्वितीयं - त्वया धनं लभ्यते, पत्न्यै दद्याः। मा वद कथं लब्धं धनमिति। तृतीयं राजा यदि पृच्छति, सर्वं वृत्तं तस्मै परमार्थतः कथयेः" इति। भरतस्तु तथैव करोमीति वाग्दानं कृत्वा गतवान्।

मार्गे गच्छन् किं कर्तव्यम् इति अजानः दूरं जगाम। अत्रान्तरे मार्गे नितरां शोकमग्नान् चतुरो वणिजः अपश्यत्। तेऽतीव दुःखिताः, यतः तान् अनुगच्छन् तेषां सुहृदेकः दिवं गतः। मृतस्य तस्य देहस्य संस्करणाय सर्वथा अपरिचिते देशे न लब्धः कोऽपि अनुकूलो मार्गदर्शी। मुनेर्वचः स्मरन् भरतः स्वयमेव मृतदेहं क्षालयितुं प्रवृतः। तस्मिन्नयस्तभरास्ते ततः अपाक्रामन्।

# 8. ವಿಧಿಲೀಲೆ

ತಿಲಕಪುರಿ ಎಂಬ ಗ್ರಾಮದಲ್ಲಿ ಭರತ ಎನ್ನುವ ಯುವಕ ತನ್ನ ಹೆಂಡತಿಯೊಂದಿಗೆ ವಾಸವಾಗಿದ್ದ. ಅವನು ತುಂಬಾ ಬಡವ. ಕಷ್ಟದಿಂದ ಜೀವನ ನಡೆಸುತ್ತಿದ್ದ. ಜೀವನಕ್ಕೆ ಯಾವುದೇ ಉದ್ಯೋಗವಿರಲಿಲ್ಲ. ಒಂದು ದಿನ ಅವನ ಹೆಂಡತಿ ಹೇಳಿದಳು– ''ನೀವು ಇವತ್ತಿನವರೆಗೂ ಉದ್ಯೋಗ ಸಿಗಲಿಲ್ಲವೆಂದು ತುಂಬಾ ದುಃಖವನ್ನು ಅನುಭವಿಸುತ್ತಿದ್ದೀರಿ. ಮನೆಯೊಳಗೆ ಕುಳಿತಿದ್ದರೆ ಕೆಲಸ ಸಿಗುವುದಿಲ್ಲ, ಆದ್ದರಿಂದ ಬೇರೆಡೆ ಹೋಗಿ ಉದ್ಯೋಗಾನ್ವೇಷಣೆ ಮಾಡಿ'' ಎಂದು. ಪತ್ನಿಯ ವಚನಾನುಸಾರ ಭರತನು ಮನೆಯಿಂದ ಹೊರಬಿದ್ದನು.

ಸ್ವಲ್ಪ ದೂರ ಹೋಗುತ್ತಿದ್ದಂತೆಯೇ ಒಂದು ಮರದ ಕೆಳಗೆ ಕುಳಿತಿದ್ದ ಒಬ್ಬ ಋಷಿಯನ್ನು ಕಂಡ. ಅವನ ಬಳಿ ಹೋದ. ಆಗ ಋಷಿಯೇ ತನ್ನ ಹತ್ತಿರ ಬಂದ ಯುವಕನನ್ನು ಕೇಳಿದ – ''ನೀನು ತುಂಬಾ ದುಃಖಿಸುತ್ತಿರುವಂತೆ ಕಾಣುತ್ತದೆ. ಅದಕ್ಕೆ ಕಾರಣವೇನು ? ಹೇಳು'' ಎಂದು. ಭರತನು ಋಷಿಗೆ ಎಲ್ಲವನ್ನೂ ತಿಳಿಸಿದ. ಋಷಿಯು ಒಂದು ಕ್ಷಣ ಚಿಂತಿಸಿ, 'ಮಗು, ನಿನಗೆ ಮೂರು ಉಪಾಯವನ್ನು ಹೇಳುತ್ತೇನೆ. ಅದರಂತೆ ನಡೆದುಕೊ. ಮೊದಲನೆಯದಾಗಿ ಯಾರು ನಿನ್ನಿಂದ ಸಹಾಯವನ್ನು ಅಪೇಕ್ಷಿಸುತ್ತಾರೋ ಅವರಿಗೆ ತಪ್ಪದೇ ಸಹಾಯ ಮಾಡು. ಎರಡು – ಒಂದು ವೇಳೆ ನಿನಗೆ ಹಣ ಸಿಕ್ಕಿದರೆ, ಹೆಂಡತಿಗೆ ಕೊಡು' ಆದರೆ ಆ ಹಣ ಹೇಗೆ ಸಂಪಾದಿಸಿದ್ದೆಂದು ಹೇಳಬೇಡ. ಮೂರು – ಮಹಾರಾಜ ಒಂದು ವೇಳೆ ನಿನ್ನನ್ನು ಕೇಳಿದರೆ, ಸುಳ್ಳು ಹೇಳಬೇಡ ಎಂದು ಹೇಳಿದನು. ಭರತನು ಹಾಗೆಯೇ ನಡೆದುಕೊಳ್ಳುತ್ತೇನೆಂದು ಹೇಳಿ, ಅಲ್ಲಿಂದ ಮುಂದೆ ಹೊರಟ.

ಏನು ಮಾಡಬೇಕೆಂದು ತೋಚದೇ ಆತ ಬಹುದೂರ ನಡೆದ. ದಾರಿಯಲ್ಲಿ ನಾಲ್ಕು ಜನ ದುಃಖಿಸುತ್ತಿರುವ ವ್ಯಾಪಾರಿಗಳನ್ನು ಕಂಡ. ಹತ್ತಿರ ಹೋಗಿ ವಿಚಾರಿಸಿದಾಗ ತಿಳಿಯಿತು, ಅವರಲ್ಲೊಬ್ಬ ಸ್ನೇಹಿತ ಸಾವನ್ನಪ್ಪಿದ್ದ. ಅಪರಿಚಿತ ಸ್ಥಳವಾದ ಅಲ್ಲಿ ಅವರಿಗೆ ಸ್ನೇಹಿತನ ಅಂತ್ಯಸಂಸ್ಕಾರ ಮಾಡಲು ಯಾರೂ ಸಹಾಯ ಮಾಡಲಿಲ್ಲ. ಇದನ್ನು ತಿಳಿದ ಭರತನು ಋಷಿಯ ಪ್ರಥಮ ವಾಕ್ಯವನ್ನು ನೆನಪಿಸಿಕೊಂಡು, ತಾನೇ ಶವಸಂಸ್ಕಾರ



एकाकी कथञ्चित् देहं परिवर्तयन् वस्त्रमपसारयन्, वस्त्रकोटौ स्वर्णनाणकानि निबद्धान्यपश्यत् । तानि स्वर्णनाणकानि पृथक् रक्षित्वा, मृतसंस्कारानन्तरं गृहं गतः पत्न्यै दत्तवान्। सा विस्मिता सन्तुष्टा 'कथमिदं धनं लब्धम्' इत्यपृच्छत्। मुनेः द्वितीयम् उपदेशं स्मरन् ''मया खानिते कूपे मृत्तिकाभिः छादितानि एतानि उपलब्धानि'' इत्यवोचत्।

'भरतेन कूपात् स्वर्णनाणकानि लब्धानि' इति वार्ता सद्यः सर्वत्र प्रससार, राजगृहेऽपि । महाराजो भरतमाहूय पुनः कूपखननाय तं चोदयामास। भरतस्तु मुनेस्तृतीयम् उपदेशं स्मरन् राज्ञे वृत्तं सर्वमुक्तवान्। राजा तस्य सत्यवचनेन तुष्टः, तं राजमन्दिरे द्वारपालकतया नियुक्तवान्।

ಮಾಡಲು ಮುಂದಾದ. ಮುಂದಿನದನ್ನು ಭರತನು ಮಾಡುವೆನೆಂದೆಣಿಸಿ, ಆ ವ್ಯಾಪಾರಿಗಳು ಅಲ್ಲಿಂದ ತೆರಳಿದರು. ಒಬ್ಬನೇ ಹೇಗೋ ಶವವನ್ನು ಹೊರಳಿಸುತ್ತ, ಶವದ ವಸ್ತ್ರವನ್ನು ತೆಗೆಯಲು ತೊಡಗಿದ. ಶವದ ವಸ್ತ್ರದಲ್ಲಿ ಸುವರ್ಣ ನಾಣ್ಯಗಳಿದ್ದವು. ಅದನ್ನು ತೆಗೆದಕೊಂಡು ತನ್ನ ಮನೆಗೆ ಹಿಂದಿರುಗಿ ಆ ನಾಣ್ಯಗಳನ್ನು ಹೆಂಡತಿಗೆ ಕೊಟ್ಟಾಗ, ಸಂತೋಷದಿಂದ ಅವಳು 'ಹೇಗೆ ಇದನ್ನು ಸಂಪಾದಿಸಿದಿರಿ' ಎಂದು ಕೇಳಿದಳು. ಆಗ ಭರತನು ಋಷಿಯ ಎರಡನೇ ವಾಕ್ಯವನ್ನು ನೆನಪಿಸಿಕೊಂಡು – "ನಾನು ಒಂದು ಭಾವಿಯನ್ನು ತೋಡುತ್ತಿದ್ದೆ, ಆಗ ಅದರೊಳಗೆ ಮುಚ್ಚಲ್ಪಟ್ಟಿದ್ದ ನಾಣ್ಯಗಳು ಸಿಕ್ಕಿದವು" ಎಂದ. 'ಭರತನಿಗೆ ಭಾವಿಯಲ್ಲಿ ಸುವರ್ಣನಾಣ್ಯಗಳು ಸಿಕ್ಕಿವೆ' ಎಂಬ ವಾರ್ತೆ ಎಲ್ಲಾ ಕಡೆ ಪ್ರಸಾರವಾಯಿತು. ಊರಿನ ಮಹಾರಾಜ ಅವನನ್ನು ಕರೆಸಿ ಇನ್ನೊಂದು ಬಾವಿಯನ್ನು ತೋಡುವಂತೆ ಅವನಿಗೆ ಹೇಳಿದ. ಭರತನು ಋಷಿಯ ಮೂರನೆಯ ವಾಕ್ಯದಂತೆ ರಾಜನಿಗೆ ನಡೆದುದೆಲ್ಲವನ್ನೂ ಹೇಳಿದ. ರಾಜನು ಅವನ ಸತ್ಯಕಥನವನ್ನು ಮೆಚ್ಚಿ ಅವನಿಗೆ ಅರಮನೆಯಲ್ಲಿ ದ್ವಾರಪಾಲಕ ಕೆಲಸವನ್ನು ಕೊಟ್ಟ.

ಅರಮನೆಯನ್ನು ರಕ್ಷಿಸುತ್ತಿರುವಾಗ ಒಮ್ಮೆ ಯಾರೋ ಒಬ್ಬ ಸೈನಿಕನೊಂದಿಗೆ ಪ್ರೇಮಸಲ್ಲಾಪದಲ್ಲಿ ತೊಡಗಿದ ರಾಣಿಯನ್ನು ಭರತ ನೋಡಿದ. ಇದರಿಂದ ಅವನಿಗೆ ತುಂಬಾ ಆಶ್ಚರ್ಯವಾಯಿತು. ತನ್ನ ನೀಚ ಕೆಲಸವನ್ನು ಭರತ ನೋಡಿದನೆಂದು ಹೆದರಿದ ರಾಣಿ ಸುದರ್ಶನೆಯು ಅವನ ಶಿರಚ್ಛೇದವನ್ನು ಮಾಡಿಸಲು ನಿಶ್ಚಯಿಸಿದಳು. ಅವಳು ತನ್ನ ಪರಿಚಾರಿಕೆಯನ್ನು ಕರೆದು ವಧಾಸ್ಥಳಕ್ಕೆ ಹೋಗಿ ಕಟುಕನಿಗೆ – 'ಬೆಳಗ್ಗೆ ಯಾರು ಮೊದಲು ನಿನ್ನ ಬಳಿ ಬರುತ್ತಾರೋ ಅವರನ್ನು ವಿಚಾರಿಸದೆ ಅವರ ತಲೆಯನ್ನು ಕಡಿದು ಹಾಕು' ಎಂದು ಹೇಳಲು ತಿಳಿಸಿದಳು. ಭರತನನ್ನು ಕರೆದು, 'ನಾಳೆ ನೀನು ಮೊದಲು ವಧಾಸ್ಥಾನಕ್ಕೆ ಹೋಗು, ಅಲ್ಲಿ ಕಟುಕ ಮುಂದಿನ ಕಾರ್ಯವನ್ನು ಹೇಳುತ್ತಾನೆ' ಎಂದು ಹೇಳಿದಳು. ಅವಳು ಆಲೋಚಿಸಿದಳು – ನಾಳೆ ಭರತನ ಶಿರಚ್ಛೇದವಾಗುತ್ತದೆ ಎಂದು.

ಆದರೆ ವಿಧಿ ಬೇರೆಯೇ ಚಿಂತಿಸಿತ್ತು. ಮರುದಿನ ಭರತ ಸುಖವಾಗಿ ನಿದ್ರಿಸುತ್ತಿದ್ದ. ಆದ್ದರಿಂದ ರಾಣಿಯ ಆಜ್ಞೆಯನ್ನು ಪಾಲಿಸುವಲ್ಲಿ ಅವನು ಸ್ವಲ್ಪ ತಡ ಮಾಡಿದ. ಅಷ್ಟರಲ್ಲಿ ವಿಧಿಯೇ ಕಳಿಸಿದಂತೆ ರಾಣಿಯ ಪ್ರಿಯಕರನಾದ ಸೈನಿಕನು ಕೆಲಸದ ನಿಮಿತ್ತ

राजगृहं परिरक्षता तेन, केनचित् सैनिकेन सह प्रेमलीलायां व्यापृता राज्ञी दृष्टा। भरतः आश्चर्यचकितोऽभवत्। आत्मनः नीचां प्रवृत्तिं भरतो दृष्टवान् इति अवगम्य, भीता राज्ञी सुदर्शना तस्य शिरच्छेदं साध्वमन्यत। स्वपरिचारिकया वध्यस्थानाधिकृतं प्रति वार्तां प्रेषयामास - 'परेद्युः प्रथमतया यः त्वामुपगच्छति, विना विचारं तस्य शिरः छेदय' इति। भरतं स्वान्तिकमानीय- 'परेद्युः प्रातः त्वया वध्यस्थानाधिकृतः द्रष्टव्यो मन्त्रिदेशेन। स उचितं विधास्यति' इति आदिशत्।

विधिः अन्यथा अचिन्तयत् इव। परेद्युः भरतः चिरं सुष्वाप। ततः राज्ञ्या आज्ञापालने विलम्बः कृतः। परं विधिप्रेरित इव, सुदर्शनायाः कामी स राज्ञः सैनिकः यदृच्छया वधाधिकृतस्य स्थानमगच्छत्। सन्देशमनुतिष्ठन् घातुकः तस्य शिरः अच्छिनत्।

सर्वमेतत् राज्ञ श्रवणं प्राप। नगरे वार्तैषा सर्वत्र प्रसारिता। राज्ञ्या गूढं दुश्चरितं राज्ञा ज्ञातम्। भरतः यथादृष्टं सर्वं तस्मै अकथयत्। राजा विस्मयाकुलः भग्नविश्वासः विरक्तः क्षणाद्बभूव। दुश्चरितस्य सैनिकस्य राज्ञीकामुकस्य मरणं, निष्पापस्य भरतस्य मरणादकस्मात् निवृत्तिः, सर्वमेतत् दैवनियुक्तमेव इति चिन्तयन् राज्ञ्या नगराद्विवासनं, भरतस्य पदोन्नतिं पुरस्कारं च दत्तवान्। भरतः पत्न्या सह मोदमानः सुखमजीवत्।



ವಧಾಸ್ಥಾನಕ್ಕೆ ಹೋದ. ರಾಣಿಯ ಆಜ್ಞೆಯಂತೆ, ಕಟುಕನು ಸೈನಿಕನ ತಲೆಯನ್ನು ಕತ್ತರಿಸಿದ.

ಇದೆಲ್ಲವೂ ರಾಜನ ಕಿವಿಗೆ ಬಿತ್ತು. ಎಲ್ಲೆಡೆಯೂ ಪ್ರಸಾರವೂ ಆಯಿತು. ರಾಣಿಯ ರಹಸ್ಯ ಬಯಲಾಯಿತು. ಭರತನು ತಾನು ಕಂಡಿದ್ದೆಲ್ಲವನ್ನೂ ರಾಜನಿಗೆ ನಿವೇದಿಸಿದ. ರಾಜನು ವಿಸ್ಮಯಚಕಿತನಾಗಿ ಒಂದುಕ್ಷಣ ಚಿಂತಿಸಿದ, ಅವನಿಗೆ ರಾಣಿಯಲ್ಲಿ ವಿಶ್ವಾಸವೇ ಹೊರಟು ಹೋಯಿತು. ವಿರಕ್ತನಾಗಿ ದುಷ್ಟನಾದ ಸೈನಿಕನ ಮರಣ, ನಿಷ್ಕಪಟಿಯಾದ ಭರತನ ಆಕಸ್ಮಾತ್ ಸಾವಿನಿಂದ ಮುಕ್ತಿ, ಇವೆಲ್ಲವೂ ವಿಧಿಲೀಲೆಯೆಂದು ಭಾವಿಸಿದ. ರಾಣಿಯನ್ನು ರಾಜ್ಯದಿಂದ ಬಹಿಷ್ಕರಿಸಿದ. ಭರತನಿಗೆ ಒಳ್ಳೆಯ ಪುರಸ್ಕಾರ ನೀಡಿ, ಉನ್ನತ ಉದ್ಯೋಗದಲ್ಲಿ ನಿಯೋಜಿಸಿದ. ಭರತನು ಪತ್ನಿಯೊಂದಿಗೆ ಬಹುಕಾಲ ಸುಖಜೀವನ ನಡೆಸಿದ.



# 9. परिणयपरिधानम्

ममता एकस्मिन् प्रख्याते कुटुम्बे जाता। तस्याः पिता मुरलीधरः कस्यचित् नृपवंश्यस्य प्रभोः बन्धुः स्वयं धनिकश्च। तस्य गृहे सेवायै परःशताः भृत्याः। तेषु कस्याश्चित्परिचारिकायाः पुत्री अमिता। ममता अमिता च समानवयस्के। बाल्यात्प्रभृति सुहृदौ सह वसतः स्म। तयोर्मध्ये स्वामिनी परिचारिकेति भेदः कदापि नानुभूतः। ममता आत्मना धृतानि वस्त्राणि, उपयुक्तानि च क्रीडनकानि तस्यै वयस्यायै प्रीता अददात्। अमितयाऽपि तानि सामोदं स्वीकृतानि। अमितायाः माता तस्यै न किमपि नूतनं वस्त्रं क्रीतवती। तथापि अमिता रञ्जकानि वस्त्राणि नात्युपयुक्तानि धृतवती तोषमवाप। ममतया सह सदा निवसन्ती, तया सह क्रीडन्ती सुखेन कालम् अयापयत्।

अचिरादेव ते बालिके कौमारमतीत्य यौवने पदं निहितवत्यौ। ममतापेक्षया अमिता अमितसुन्दरी जाता। ततःपरम् आत्मनो यौवनं सौन्दर्यं च अभिज्ञातवती, मनसि कमपि खेदमवहत्। 'ममतापेक्षया अहं सुन्दरी। परं ममतया उपयुक्तचराण्येव वस्त्राणि धारयामि। न कदापि नूतनानि। किमहं नूतनस्य वस्तुन उपभोगाय नार्हा ?' इति चिन्ता दिने दिनेऽवर्धत। मन्युश्च उद्भूतः 'कुतो मह्यं उपभुक्तपूर्वमेव सा ददाति ? कुतो न नूतनम्?'

'सा प्रभुः स्वामिनी, अहं भृत्यपुत्री। कथं समाना भवेयम् ?' इति न कदापि चिन्तितवती। तस्या विषादं तोषं वा अनादृत्यैव महान् कालोऽपयातः।

# 9. ಮದುವೆಯ ಸೀರೆ

ಮಮತಾ ಒಂದು ಪ್ರಖ್ಯಾತ ಕುಟುಂಬದಲ್ಲಿ ಹುಟ್ಟಿದವಳು. ಅವಳ ತಂದೆ ಮುರಳೀಧರ ಯಾವುದೋ ಒಂದು ರಾಜವಂಶದ ಪ್ರಭುವಿನ ಬಂಧು, ಸ್ವಯಂ ಧನಿಕನೂ ಕೂಡಾ. ಅವರ ಮನೆಯಲ್ಲಿ ಸೇವೆಗಾಗಿ ಹೆಚ್ಚು ಕಡಿಮೆ ನೂರಾರು ಜನ ಸೇವಕರಿದ್ದರು. ಅವರಲ್ಲಿ ಒಬ್ಬಳ ಮಗಳು ಅಮಿತಾ. ಮಮತಾ ಮತ್ತು ಅಮಿತಾ ಒಂದೇ ವಯಸ್ಸಿನವರು. ಬಾಲ್ಯಕಾಲದಿಂದಲೂ ಒಟ್ಟಿಗೆ ಬೆಳೆದವರು. ಅವರಿಬ್ಬರಲ್ಲಿ ನಾನು ಮನೆಯವಳು, ಅವಳು ಕೆಲಸದವಳು ಈ ರೀತಿಯಾದ ಭಾವನೆ ಯಾವಾಗಲೂ ಬರಲೇ ಇಲ್ಲ. ಮಮತಾ ತಾನು ಹಾಕಿಕೊಂಡಿರುವ ಬಟ್ಟೆ ಮತ್ತು ಆಟವಾಡಿದ ಸಾಮಾನುಗಳನ್ನು ತನ್ನ ಗೆಳತಿಗೆ ಪ್ರೀತಿಯಿಂದ ಕೊಡುತ್ತಿದ್ದಳು. ಅಮಿತಾಳೂ ಕೂಡ ಅವುಗಳನ್ನು ಸಂತೋಷದಿಂದ ತೆಗೆದುಕೊಳ್ಳುತ್ತಿದ್ದಳು. ಅಮಿತಾಳ ತಾಯಿ ಅವಳಿಗೋಸ್ಕರ ಯಾವುದೇ ಹೊಸ ಬಟ್ಟೆಯನ್ನು ತೆಗೆದುಕೊಳ್ಳುತ್ತಿರಲಿಲ್ಲ. ಆದರೂ ಕೂಡಾ ಅಮಿತಾ ತೊಳೆದ ಬಟ್ಟೆಗಳನ್ನು ಹಾಕಿಕೊಂಡು ಸಂತೋಷಪಡುತ್ತಿದ್ದಳು. ಮಮತಾಳ ಜೊತೆಯಲ್ಲೇ ಸದಾ ಇರುತ್ತಿದ್ದಳು. ಅವಳ ಜೊತೆಯಲ್ಲೆ ಆಟವಾಡುತ್ತಾ ಸುಖದಿಂದ ಕಾಲವನ್ನು ಕಳೆಯುತ್ತಿದ್ದಳು.

ಕಾಲ ಕಳೆದಂತೆ ಇಬ್ಬರು ಹುಡುಗಿಯರೂ ಸಹ ಯುವತಿಯರಾದರು. ಮಮತಾಳಿಗಿಂತಲೂ ಅಮಿತಾ ಹೆಚ್ಚು ಸೌಂದರ್ಯವುಳ್ಳವಳಾಗಿದ್ದಳು. ಆದರಿಂದ ತನ್ನ ಯೌವನ ಮತ್ತು ಸೌಂದರ್ಯವನ್ನು ಕೂಡಾ ತಿಳಿದುಕೊಂಡಳು. ಮನಸ್ಸಿನಲ್ಲಿಯೇ ಒಂದು ತರಹದ ಖೇದವನ್ನು ಅನುಭವಿಸಿದಳು. 'ಮಮತಾಳಿಗಿಂತಲೂ ನಾನು ಸುಂದರಿ. ಆದರೂ ಕೂಡಾ ನಾನು ಮಮತಾಳು ಉಪಯೋಗಿಸಿದ ಬಟ್ಟೆಗಳನ್ನೇ ಹಾಕಿಕೊಳ್ಳುತ್ತೇನೆ. ಒಂದು ಸಾರಿಯಾದರೂ ಹೊಸ ಬಟ್ಟೆ ಹಾಕಿಕೊಳ್ಳಲು ನಾನು ಅರ್ಹಳಲ್ಲವೇ?' ಈ ರೀತಿಯಾದ ಚಿಂತೆ ದಿನೇ ದಿನೇ ಬೆಳೆಯುತ್ತಾ ಹೋಯಿತು.

विवाहयोग्यं वयः इति चिन्तयन्तौ ममतायाः पितरौ रमेशनामकेन अनुरूपेण वरेण सह ममताया विवाहं निश्चितवन्तौ। तथैव अमिताया अपि कश्चन वरो निर्णीतः ममतायाः पितृभ्याम्। ममताया विवाहदिनादनन्तरे दिने अपि तस्या विवाहो निश्चितः।

ममतायाः कृते सर्वं वैवाहिकं मण्डनं, बहुमूल्यं परिणयपरिधानं च क्रीतम्। अमितायै अपि ततोऽपि किञ्चिदूनमूल्यं परिधानं विवाहकालिकपारितोषिकतया दत्तम् । अमिता अतीव सन्तुष्टा यत् इदानीमेव इदंप्रथमतया नूतनं वस्त्रं तदर्थे क्रीतं दत्तञ्च । प्रथमं नूतनं वस्त्रम् इति स्पृष्ट्वा स्पृष्ट्वा महान्तमानन्दमन्वभवत्। सद्यः तद्वस्त्रं धृतवती इतस्ततश्चचार। अतीव सुन्दरी सा अदृश्यत।

ममताया विवाहदिनात् पूर्वेद्युः सायं समयः। अमिता नूतनवस्त्रधरा कस्मिंश्चित् रजतभाजने मिष्टं भक्ष्यजातमादाय आगतेभ्यः बन्धुभ्यः सुहृद्भ्यश्च व्यतरत्। सर्वे तां दृष्ट्वा तस्याः सौन्दर्येणाकृष्टा अभवन्। क्रमेण सा ममतायाः भविष्यत्पतेः वासकोष्ठं प्राविशत्। तस्मा अपि मिष्टभक्ष्यवितरणव्याजेन तस्य मनोऽपाहरत् । तस्याः सौन्दर्येणाकृष्टः स रमेशः परिसरमविचिन्त्यैव, तामपैक्षत तेन सह कञ्चित्कालं यापयितुम्। सा तन्मनोगतं सम्यक् जानती तस्यापेक्षामङ्गीकृतवती। रमेशः अमिताया जाले अपतदेव।

परेद्युः ममताया विवाहः सम्यक् संपन्नः । रात्रौ पत्युः शयनागारं प्रविशन्ती ममता स्वेन तस्मिन् दिने धृतं परिणयपरिधानम् अमितायै यथापूर्वं प्रीत्या ददौ। अमिता तु विनयेन तत्स्वीकृतवती धन्यां मन्यमाना अवोचत् - '' प्रियसखि ! अनुगृहीतास्मि, यत् विवाहानन्तरमपि यथापूर्वं

'ಮಮತಾ ನನಗೆ ಹಾಕಿಕೊಂಡ ಬಟ್ಟೆಯನ್ನೇ ಕೊಡುತ್ತಾಳೆಯೇ ಹೊರತು, ಹೊಸ ಬಟ್ಟೆಗಳನ್ನು ಅಲ್ಲ. ಅವಳು ಗೃಹಸ್ವಾಮಿಯ ಮಗಳು. ಆದರೆ ನಾನು ಕೆಲಸದವಳ ಮಗಳು, ಹೇಗೆ ಸಮಾನಳಾದೇನು ?' ಎಂದು ಆಕೆ ಎಂದೂ ಆಲೋಚಿಸಲೇ ಇಲ್ಲ. ಆಕೆಯ ವಿಷಾದವನ್ನಾಗಲೀ ಸಂತೋಷವನ್ನಾಗಲೀ ಲೆಕ್ಕಿಸದೆ ಕಾಲ ಹೀಗೆಯೇ ಕಳೆಯಿತು.

ವಿವಾಹ ಯೋಗ್ಯಳಾದ ಮಗಳನ್ನು ನೋಡಿ ಮಮತಾಳ ತಂದೆ ತಾಯಿಗಳು, ರಮೇಶ ಎಂಬ ಹೆಸರಿನ ರೂಪವಂತ ವರನ ಜೊತೆ ಮಮತಾಳ ವಿವಾಹವನ್ನು ನಿಶ್ಚಯಮಾಡಿದರು. ಹಾಗೆಯೇ ಅಮಿತಾಳ ವಿವಾಹವನ್ನು ಕೂಡ ನಿಶ್ಚಯಿಸಿದರು. ಮಮತಾಳಿಗಾಗಿ ಎಲ್ಲ ವಿಧದ ಒಡವೆಗಳನ್ನೂ ಬೆಲೆಬಾಳುವ ಮದುವೆಯ ಸೀರೆಯನ್ನೂ ಕೊಂಡುಕೊಳ್ಳಲಾಯಿತು. ಅಮಿತಾಳಿಗಾಗಿ ಕಡಿಮೆ ಬೆಲೆಯ ಮದುವೆ ಸೀರೆಯನ್ನು ಕೊಂಡು ಮದುವೆಯ ಉಡುಗೊರೆಯಾಗಿ ನೀಡಲಾಯಿತು. ಅಮಿತಾಳಿಗೆ ತುಂಬಾ ಸಂತೋಷವಾಯಿತು. ಇದೇ ಮೊದಲ ಬಾರಿಗೆ ಹೊಸ ಬಟ್ಟೆಯನ್ನು ಪಡೆದದ್ದರಿಂದ ಅದನ್ನು ಮತ್ತೆ ಮತ್ತೆ ಮುಟ್ಟಿ ಸಂತೋಷವನ್ನು ಅನುಭವಿಸಿದಳು ಅಮಿತಾ.

ಮಮತಾಳ ಮದುವೆಯ ಹಿಂದಿನ ದಿನದ ಸಾಯಂಕಾಲದ ಸಮಯ. ಅಮಿತಳು ಹೊಸಬಟ್ಟೆ ತೊಟ್ಟು ಬೆಳ್ಳಿಯ ಪಾತ್ರೆಯಲ್ಲಿ ಭಕ್ಷ್ಯಾದಿಗಳನ್ನಿರಿಸಿಕೊಂಡು ಬಂದಿರುವ ಬಂಧುಮಿತ್ರರೆಲ್ಲರಿಗೂ ಹಂಚಿದಳು. ಎಲ್ಲರೂ ಅವಳನ್ನೂ ಅವಳ ಸೌಂದರ್ಯವನ್ನೂ ನೋಡಿ ಆಕರ್ಷಿತರಾದರು. ಎಲ್ಲರಿಗೂ ಸಿಹಿ ಹಂಚುತ್ತ ಆಕೆ ಮಮತೆಯ ಭಾವೀಗಂಡನ ವಾಸದ ಕೋಣೆಯನ್ನು ಹೊಕ್ಕಳು. ಸಿಹಿಯನ್ನು ಕೊಡುವ ನೆಪದಲ್ಲಿ ಆಕೆ ಅವನ ಮನಸ್ಸನ್ನು ಅಪಹರಿಸಿದಳು. ಅವಳ ಸೌಂದರ್ಯವನ್ನು ಕಂಡು ಮೋಹಗೊಂಡ ರಮೇಶನು ದೇಶಕಾಲವಾವುದನ್ನೂ ಲಕ್ಷಿಸದೇ ಅವಳೊಂದಿಗೆ ಸ್ವಲ್ಪಕಾಲ ಕಳೆಯುವ ಅಪೇಕ್ಷೆಯನ್ನು ವ್ಯಕ್ತಪಡಿಸಿದನು. ಅವಳು ರಮೇಶನ ಮನೋಗತವನ್ನು ಸರಿಯಾಗಿ ತಿಳಿದವಳಾಗಿ ಅವನ ಅಪೇಕ್ಷೆಯನ್ನು ಒಪ್ಪಿಕೊಂಡಳು. ರಮೇಶನು ಅಮಿತಳ ಬಲೆಯಲ್ಲಿ ಸಿಕ್ಕಿಬಿದ್ದನು.



परिणयकाले धृतं नूतनं परिधानं दत्तवती त्वम्। परं तुभ्यं दातुं न किञ्चिदस्ति मे वशे ! परम् अद्य रात्रौ शयनागारे, मया उपभुक्तपूर्वं किमपि ते नूतनं वस्तु त्वदर्थे मया सज्जीकृतं वर्तते। अद्यैवाहमनृणा, यत् त्वं यथा व्यवहृतवती मया सह, तथैवाहमपि त्वया सह व्यवहृतवती । धन्यास्मि । अद्यैव कृतकृत्यास्मि'' इति वदन्ती एव किं तदिति पृच्छन्तीं सखीमनादृत्यैव ततोऽपाक्रामत।

अमर्षो मर्यादामुप्यल्लङ्घयितुं प्रचोदयति ।



ಮರುದಿನ ಮಮತೆಯ ಮದುವೆ ಚೆನ್ನಾಗಿ ನಡೆಯಿತು. ರಾತ್ರಿ ಗಂಡನ ಶಯನಾಗಾರವನ್ನು ಹೊಕ್ಕುತ್ತಾ ಮಮತೆಯು ಆದಿನ ಧರಿಸಿದ್ದ ಮದುವೆ ಸೀರೆಯನ್ನು ಅಮಿತಳಿಗೆ ಎಂದಿನಂತೆ ಪ್ರೀತಿಯಿಂದ ಕೊಟ್ಟಳು. ಅಮಿತಳು ಅದನ್ನು ವಿನಯದಿಂದ ತೆಗೆದುಕೊಳ್ಳುತ್ತ ಧನ್ಯತೆಯನ್ನು ಪ್ರಕಟಿಸುತ್ತ ''ಆತ್ಮೀಯ ಗೆಳತಿ, ಮದುವೆಯ ನಂತರವೂ ಎಂದಿನಂತೆಯೇ ಮದುವೆಯ ಸೀರೆಯನ್ನು ನನಗೆ ನೀಡಿರುವೆ. ನಿನ್ನ ಉಪಕಾರ ಎಂತು ತೀರಿಸಲಿ ? ಆದರೆ ನಿನಗೆ ಕೊಡಲು ನನ್ನ ಬಳಿ ಏನೂ ಇಲ್ಲ ನೀನು ಉಪಯೋಗಿಸಿ ಬಿಟ್ಟದ್ದನ್ನು ನನಗೆ ಸದಾ ಕೊಡುತ್ತಿದ್ದಂತೆಯೇ ನಾನೂ ಒಂದು ಉಪಯೋಗಿಸಿ ಬಿಟ್ಟ ವಸ್ತುವನ್ನು ಕೊಡಬಯಸಿದ್ದೇನೆ. ಇಂದು ರಾತ್ರಿ ಶಯನಾಗಾರದಲ್ಲಿ ನಾನು ಉಪಯೋಗಿಸಿ ಬಿಟ್ಟ ಹೊಸ ವಸ್ತುವೊಂದನ್ನು ನೀನು ಪಡೆಯಲಿರುವಿ. ನೀನು ನನ್ನೊಡನೆ ಹೇಗೆ ನಡೆದುಕೊಂಡೆಯೋ ಹಾಗೆಯೇ ನಡೆದುಕೊಳ್ಳಲು ಶಕ್ತಳಾದೆನಾದ್ದರಿಂದ ನಾನಿಂದು ಋಣಮುಕ್ತಳಾಗಿದ್ದೇನೆ. ಕೃತಕೃತ್ಯಳಾಗಿದ್ದೇನೆ. ನಾನಿಂದು ಧನ್ಯೆ'' ಎನ್ನುತ್ತ ಅದೇನೆಂದು ಕೇಳುತ್ತಿರುವ ಗೆಳತಿಯನ್ನು ಉಪೇಕ್ಷೆಯಿಂದ ನೋಡುತ್ತಾ ಅಲ್ಲಿಂದ ನಿರ್ಗಮಿಸಿದಳು.

*ನೀತಿ : ಕೋಪ ಅಸೂಯೆಗಳು ಮರ್ಯಾದೆಯ ಗಡಿಯನ್ನು ದಾಟುವುದಕ್ಕೆ ಪ್ರಚೋದನೆ ನೀಡುತ್ತವೆ.*



# 10. ताना रीरी च

अकबरचक्रवर्तिनः आस्थाने तोडरमल्लः, बीरबलः, तानसेनः इत्यादयः विद्वांसः आसन् । तानसेनः अद्वितीयः गायकः । कदाचित् अकबरस्य पत्नी महाराज्ञी तानसेनम् उक्तवती- "भवान् आगामिदीपावलीरात्रौ दीपकरागगानेन राजभवने दीपान् ज्वालयतु " इति। परन्तु तानसेनः एतत् विनयेन निराकृतवान्। यतः सः जानाति स्म यत् दीपकरागालापनेन स्वशरीरं नितराम् उष्णं भवति, तेन कदाचित् मरणमपि सम्भाव्यते' इति। एतद् ज्ञात्वा महाराज्ञी अपि पुनः अनुरोधं न कृतवती।

अथ कदाचित् मथुरायां निवसतः तानसेनस्य गुरोः हरिदासवर्यस्य मरणम् अभवत् । तानसेनः झटिति मथुरां गतवान् । तत्र गुरोः वासस्थलं गत्वा दीपकरागालापनेन तस्य चितां ज्वालितवान् । अकबरचक्रवर्ती अपि सपत्नीकः तत्र गत्वा अन्त्यक्रियासु भागं गृहीतवान् । ततः सर्वे आग्रानगरं प्रत्यागताः ।

अचिरादेव तानसेनः रुग्णः जातः । दीपकरागालापनेन तस्य शरीरे उत्पन्ना उष्णता न शान्ता एव। तस्याः उपशमनार्थम् एकः उपायः यत् अन्येन केनचित् अत्यन्तमेधाविना सङ्गीतज्ञेन गीयमानं मल्हाररागालापनं श्रोतव्यम्। परन्तु तानसेनसदृशः गायकः न कोऽपि अन्यः आसीत्। अतः मार्गान्तरम् अपश्यन् तानसेनः राजवैद्यानां सूचनानुसारं तीर्थयात्रार्थं प्रस्थितवान्। अकबरः अमजदखाननामकं रक्षापुरुषं सैन्यसहितं तस्य साहाय्यार्थं प्रेषितवान्।

तैः बहूनि तीर्थक्षेत्राणि दृष्टानि । अन्ते गुजराते कस्मिंश्चित् ग्रामे

# 10. ತಾನಾ- ರೀರೀ

ಅಕ್ಬರ ಮಹಾರಾಜನ ಆಸ್ಥಾನದಲ್ಲಿ ತೋಡರಮಲ್ಲ, ಬೀರಬಲ್ಲ, ತಾನಸೇನ ಮುಂತಾದ ವಿದ್ವಾಂಸರಿದ್ದರು. ಅವರಲ್ಲಿ ತಾನಸೇನನು ಅದ್ವಿತೀಯ ಗಾಯಕನಾಗಿದ್ದನು.

ಒಮ್ಮೆ ಅಕ್ಬರ ಮಹಾರಾಜನ ಹೆಂಡತಿ ತಾನಸೇನನನ್ನು ಕರೆದು– ''ತಾನಸೇನ, ನೀನು ಮುಂದಿನ ದೀಪಾವಳಿ ಹಬ್ಬದ ದಿನ ರಾತ್ರಿ ದೀಪಕ ರಾಗವನ್ನು ಹಾಡಿ, ರಾಜಭವನದಲ್ಲಿ ದೀಪಗಳನ್ನು ಬೆಳಗಿಸು''ಎಂದು ಹೇಳಿದಳು. ಅದನ್ನು ಕೇಳಿದ ತಾನಸೇನನು ವಿನಯದಿಂದಲೇ ನಿರಾಕರಿಸಿದನು., ಯಾಕೆಂದರೆ ದೀಪಕರಾಗವನ್ನು ಹಾಡುವವರ ಶರೀರದಲ್ಲಿ ತುಂಬಾ ಬಿಸಿಯೇರುತ್ತದೆ. ಮರಣವೂ ಸಂಭವಿಸಬಹುದು. ಇದನ್ನು ತಿಳಿದ ಮಹಾರಾಣಿಯು ಅವನನ್ನು ಒತ್ತಾಯಿಸಲಿಲ್ಲ.

ಹೀಗಿರುವಾಗ ಮಧುರೆಯಲ್ಲಿ ವಾಸಿಸುತ್ತಿದ್ದ ತಾನಸೇನನ ಗುರುಗಳಾದ ಹರಿದಾಸರು ಮರಣವನ್ನಪ್ಪಿದರು. ತಕ್ಷಣವೇ ತಾನಸೇನನು ಮಧುರೆಗೆ ತೆರಳಿದನು. ಅಲ್ಲಿ ದೀಪಕರಾಗವನ್ನು ಹಾಡಿ ಗುರುವಿನ ಚಿತೆಯನ್ನು ಹಚ್ಚಿದನು. ಅಂತ್ಯಕ್ರಿಯೆಯಲ್ಲಿ ಅಕ್ಬರ ಮಹಾರಾಜನೂ ಮಹಾರಾಣಿಯೊಂದಿಗೆ ಪಾಲ್ಗೊಂಡಿದ್ದನು. ಅಂತ್ಯಕ್ರಿಯೆಗಳೆಲ್ಲ ಮುಗಿದ ನಂತರ ಎಲ್ಲರೂ ಆಗ್ರಾ ನಗರಕ್ಕೆ ಬಂದರು.

ಕೆಲ ದಿನಗಳಲ್ಲಿಯೇ ತಾನಸೇನನು ರೋಗಗ್ರಸ್ತನಾದನು. ದೀಪಕರಾಗವನ್ನು ಹಾಡಿದ್ದರಿಂದ ಅವನ ಶರೀರದಲ್ಲಿ ಉಂಟಾದ ಉಷ್ಣತೆ ಶಾಂತವಾಗಲೇ ಇಲ್ಲ. ಅದು ಶಾಂತವಾಗಲು ಇರುವ ಒಂದೇ ಉಪಾಯವೆಂದರೆ ಬೇರೆ ಯಾರಾದರೂ ಮೇಧಾವಿಯಾದ ಸಂಗೀತಜ್ಞರು ಹಾಡುವ 'ಮಲ್ಹಾರ ರಾಗ'ವನ್ನು ಕೇಳುವುದು. ಆದರೆ ತಾನಸೇನನಂತಹ ಗಾಯಕನು ಬೇರೆ ಯಾರೂ ಇರಲಿಲ್ಲ. ತಾನಸೇನನು ಬೇರೆ ಮಾರ್ಗ ಕಾಣದೇ ರಾಜ ವೈದ್ಯರ ಸೂಚನೆಯಂತೆ ತೀರ್ಥಯಾತ್ರೆಗೆ ಹೊರಟನು. ಅಕ್ಬರನು

नदीतीरे शिबिरं कृत्वा ते कतिचन दिनानि यापितवन्तः। अत्रान्तरे एतां वार्तां ज्ञात्वा ग्रामाधिकारी काञ्चनलालः तानसेनस्य दर्शनाय आगतवान्। सः तानसेनस्य अस्वास्थ्यस्य कारणं ज्ञात्वा तम् उक्तवान् - 'श्रीमान्! मम यमले पुत्र्यौ स्तः- ताना रीरी चेति। ताभ्यां सुदीर्घः सङ्गीताभ्यासः कृतः अस्ति। अहं तयोः मल्हाररागालापनस्य व्यवस्थां कारयामि। किन्तु तयोः काचित् प्रतिज्ञा अस्ति यत् ते ग्रामदेवतायाः समक्षमेव गायतः, न तु अन्यत्र। अतः भवता एव तत्र आगन्तव्यं भवति' इति।

तानसेनः तद् अङ्गीकृतवान्। ग्रामदेवतायाः पुरतः तयोः सङ्गीतकार्यक्रमः व्यवस्थापितः। ताना-रीरीभ्यां मल्हाररागालापनम् आरब्धम्। तयोः रागशुद्धिं स्वरमाधुर्यं गीतस्य श्रुतिमनोहारित्वं च ज्ञात्वा तानसेनः नितरां विस्मितः जातः। गीतसमाप्तिसमये धारासारैः महती वृष्टिः जाता। तानसेनस्य अस्वास्थ्यमपि द्रुतमेव अपगतम्। अत्यन्तं संतुष्टः



ಅಮಜದಖಾನನೆಂಬ ಅಂಗರಕ್ಷಕನನ್ನು ಸೈನ್ಯಸಹಿತವಾಗಿ ತಾನಸೇನನ ಸಹಾಯಕ್ಕಾಗಿ ಕಳುಹಿಸಿದನು. ಅವರು ತುಂಬಾ ತೀರ್ಥಕ್ಷೇತ್ರಗಳನ್ನು ತಿರುಗಿ, ಗುಜರಾತಿನ ಒಂದು ಸಣ್ಣ ಹಳ್ಳಿಯನ್ನು ತಲುಪಿದರು. ಅಲ್ಲಿಯ ನದೀತೀರದಲ್ಲಿಯೇ ಶಿಬಿರ ಮಾಡಿ ಕೆಲದಿನಗಳನ್ನು ಕಳೆದರು.

ಹೀಗಿರಲು ಒಂದು ದಿನ ಈ ವಾರ್ತೆಯನ್ನು ಅಲ್ಲಿಯ ಗ್ರಾಮಾಧಿಕಾರಿಯಾದ ಕಾಂಚನಲಾಲ ಕೇಳಿದನು. ಅವನು ತಾನಸೇನನನ್ನು ನೋಡಲು ಬಂದನು. ಅವನು ತಾನಸೇನನ ಅನಾರೋಗ್ಯದ ಕಾರಣವನ್ನು ತಿಳಿದು ''ಶ್ರೀಮನ್, ನನಗೆ ಅವಳಿಗಳಾದ ಇಬ್ಬರು ಪುತ್ರಿಯರಿದ್ದಾರೆ. ತಾನಾ, ರೀರೀ ಎಂಬುದು ಅವರೀರ್ವರ ಹೆಸರು. ಅವರಿಬ್ಬರೂ ಬಹಳ ಕಾಲ ಸಂಗೀತಾಭ್ಯಾಸ ಮಾಡಿದ್ದಾರೆ. ಅವರಿಬ್ಬರೂ 'ಮಲ್ಹಾರರಾಗ'ವನ್ನು ಹಾಡಲು ನಾನು ವ್ಯವಸ್ಥೆ ಮಾಡುತ್ತೇನೆ. ಆದರೆ ಅವರದ್ದೊಂದು ಪ್ರತಿಜ್ಞೆ ಇದೆ. ಗ್ರಾಮದೇವತೆಯ ಮುಂದೆ ಮಾತ್ರ ಅವರು ಹಾಡುತ್ತಾರೆ. ಆದ್ದರಿಂದ ತಾವೇ ಅಲ್ಲಿಗೆ ದಯಮಾಡಿಸಬೇಕು'' ಎಂದು ಹೇಳಿದನು. ತಾನಸೇನನು ಅದನ್ನು ಒಪ್ಪಿಕೊಂಡನು.

ಗ್ರಾಮದೇವತೆಯ ಎದುರಿನಲ್ಲಿ ಅವರಿಬ್ಬರ ಸಂಗೀತ ಕಾರ್ಯಕ್ರಮದ ವ್ಯವಸ್ಥೆಯಾಯಿತು. ತಾನಾ–ರೀರೀ ಇಬ್ಬರೂ ಮಲ್ಹಾರ ರಾಗವನ್ನು ಆರಂಭಿಸಿದರು. ಅವರಬ್ಬರ ರಾಗಶುದ್ಧಿ, ಸ್ವರ ಮಾಧುರ್ಯ, ಗೀತೆಯ ಶ್ರುತಿ, ಮನೋಹರತ್ವವನ್ನು ಕೇಳಿ ತಾನಸೇನನು ಆಶ್ಚರ್ಯಚಕಿತನಾದನು. ಹಾಡು ಮುಗಿಯುತ್ತಿದ್ದಂತೆ ಧಾರಾಕಾರವಾಗಿ ಮಳೆ ಬರಲಾರಂಭಿಸಿತು. ತಾನಸೇನನ ಅನಾರೋಗ್ಯ ಮಂಜಿನಂತೆ ಕರಗಿತು.

ಸಂತುಷ್ಟನಾದ ತಾನಸೇನನು ಅಕ್ಬರ ಮಹಾರಾಜನ ಹೆಸರಿನಲ್ಲಿ ತಾನಾ–ರೀರೀಯರಿಗೆ ತುಂಬಾ ಉಡುಗೊರೆಗಳನ್ನು ನೀಡಿದನು. ಆದರ ಕಾಂಚನಲಾಲನು ಅವುಗಳನ್ನು ವಿನಯದಿಂದ ನಿರಾಕರಿಸಿದನು.

ಅಲ್ಲಿಂದ ಆಗ್ರಾಕ್ಕೆ ಹಿಂದಿರುಗಿದ ತಾನಸೇನನು ನಡೆದುದೆಲ್ಲವನ್ನೂ ಅಕ್ಬರನಿಗೆ

तानसेनः चक्रवर्तिनः अकबरस्य नाम्ना ताना-रीरीभ्यां बहूनि उपायनानि दत्तवान् । परन्तु काञ्चनलालः तानि विनयेन निराकृतवान्।

ततः आग्रानगरं प्रत्यागतः तानसेनः प्रवृत्तं सर्वम् अकबरं निवेदितवान् । तन्मध्ये अमजदखानः 'काञ्चनलालः अकबरस्य नाम्ना दत्तानि उपायनानि निराकृतवान्' इत्यापि उक्तवान्। तद् श्रुत्वा अकबरः नितरां क्रुद्धः अभवत् । पूर्वापरम् अनालोच्य सः झटिति अमजदखानम् आदिष्टवान् - ''विना विलम्बं ते बालिके अत्र आनीय तयोः सङ्गीतकार्यक्रमम् आयोजयतु'' इति ।

''परंतु ते ग्रामदेवतायाः समक्षमेव गायतः, न तु अन्यत्र । अतः तयोः अत्र आनयनप्रयासः व्यर्थः'' इति तानसेनः बहुवारं निवेदितवान् । परन्तु क्रोधान्धः अकवरः तद् न श्रुतवान् एव ।

झटिति एव अमजदखानः प्रस्थितः। सः तं ग्रामं प्राप्य सर्वं काञ्चनलालं निवेदितवान् । ग्रामीणाः सर्वे एतां वार्तां श्रुत्वा किङ्कर्तव्यतामूढाः जाताः। चक्रवर्तिनः कृतघ्नतां ज्ञात्वा रोषाकुलाश्च जाताः। ''श्वः प्रातः एव माया सह पुत्रीभ्यां सह भवता आग्रानगरं प्रति प्रस्थातव्यम्'' इति काञ्चनलालं कठोरं सूचितवान् अमजदखानः । ताना रीरी च नितराम् उद्विग्ने जाते। प्रतिज्ञाभङ्गं कर्तुं कथमपि ते न सन्नद्धे।

महता कष्टेन एव सा रात्रिः अतीता । प्रातः यदा अमजदखानः आग्रागमनाय उपस्थितः, तदा 'तानारीरी च कुत्रापि न दृश्येते' इति वार्ता प्राप्ता । जनाः तयोः अन्वेषणार्थं सर्वत्र गताः । अन्ते च ग्रामात् बहिः स्थिते कूपे तयोः शरीरे दृष्टे । काञ्चनलालः दुःखसागरे निमग्नः जातः ।

अमजदखानः रिक्तहस्ततया आग्रां गत्वा प्रवृत्तं सर्वं राजसभाया

ಹೇಳಿದನು. ಮಧ್ಯದಲ್ಲಿಯೇ ಅಮಜದಖಾನನು ''ಕಾಂಚನಲಾಲನು ಅಕ್ಬರನ ಹೆಸರಿನಲ್ಲಿ ಕೊಟ್ಟ ಉಡುಗೊರೆಗಳನ್ನು ನಿರಾಕರಿಸಿದನು'' ಎಂಬುದಾಗಿ ಹೇಳಿದನು. ಅದನ್ನು ಕೇಳಿ ಕೋಪಗೊಂಡು ಪೂರ್ವಾಪರಗಳನ್ನು ವಿವೇಚಿಸದ ಅಕಬರನು ಅಮಜದಖಾನನ್ನು ಕುರಿತು – ''ತಕ್ಷಣವೇ ಆ ಇಬ್ಬರು ಹುಡುಗಿಯರನ್ನು ಕರೆತಂದು ಇಲ್ಲಿ ಅವರಿಬ್ಬರ ಸಂಗೀತ ಕಾರ್ಯಕ್ರಮವನ್ನು ಏರ್ಪಡಿಸು'' ಎಂದು ಆಜ್ಞೆ ಮಾಡಿದನು.

''ಅವರಿಬ್ಬರೂ ಕೇವಲ ಗ್ರಾಮದೇವತೆಯ ಮುಂದಷ್ಟೇ ಹಾಡುತ್ತಾರೆ. ಬೇರೆಯ ಸ್ಥಳಗಳಲ್ಲಿ ರಾಗಾಲಾಪನೆ ಮಾಡುವುದಿಲ್ಲ. ಅವರಿಬ್ಬರನ್ನು ಇಲ್ಲಿಗೆ ಕರೆತರುವ ಪ್ರಯಾಸ ವ್ಯರ್ಥವೇ'' ಎಂದು ತಾನಸೇನನು ಹಲವು ಬಾರಿ ನಿವೇದಿಸಿಕೊಂಡನು. ಆದರೆ ಕ್ರೋಧಾಂಧನಾದ ಅಕ್ಬರನು ಅದನ್ನು ಕೇಳಲೇ ಇಲ್ಲ.

ಅಮಜದಖಾನನು ಕೂಡಲೇ ಅಲ್ಲಿಂದ ಹೊರಟನು. ಕಾಂಚನಲಾಲನಿಗೆ ಎಲ್ಲವನ್ನೂ ಹೇಳಿದನು. ಗ್ರಾಮಸ್ಥರೆಲ್ಲರೂ ಈ ವಾರ್ತೆಯನ್ನು ಕೇಳಿ ಕಿಂಕರ್ತವ್ಯ ಮೂಢರಾದರು. ಅಕ್ಬರನ ಕೃತಘ್ನತೆಯನ್ನು ತಿಳಿದು ರೋಷಾವಿಷ್ಟರಾದರು. ''ನಾಳೆ ಬೆಳಿಗ್ಗೆಯೇ ನನ್ನ ಜೊತೆ ನೀನು ಪುತ್ರಿಯರೊಂದಿಗೆ ಆಗ್ರಾಕ್ಕೆ ಹೊರಡಬೇಕು'' ಎಂದು ಅಮಜದಖಾನನು ಕಠೋರವಾಗಿ ಕಾಂಚನಲಾಲನಿಗೆ ಆಜ್ಞೆ ಮಾಡಿದನು. ತಾನಾ–ರೀರೀಯರು ತುಂಬಾ ಉದ್ವಿಗ್ನರಾದರು. ಅವರಿಬ್ಬರೂ ಪ್ರತಿಜ್ಞಾಭಂಗಕ್ಕೆ ಸಿದ್ಧರಿರಲಿಲ್ಲ.

ಬಹಳ ಕಷ್ಟದಿಂದ ಆ ರಾತ್ರಿಯು ಕಳೆಯಿತು. ಬೆಳಿಗ್ಗೆ ಅಮಜದಖಾನನು ಆಗ್ರಾಕ್ಕೆ ಹೊರಟಾಗ ತಾನಾ–ರೀರೀಯರು ಎಲ್ಲೂ ಕಾಣಿಸುತ್ತಿಲ್ಲ ಎಂಬ ವಾರ್ತೆಯನ್ನು ಕೇಳಿದನು. ಗ್ರಾಮಸ್ಥರು ಅವರಿಬ್ಬರನ್ನೂ ಹುಡುಕಲು ಎಲ್ಲಾ ಕಡೆಗೂ ಹೋದರು. ಕೊನೆಗೆ ಗ್ರಾಮದ ಹೊರಗಿನ ಬಾವಿಯಲ್ಲಿ ತಾನಾ–ರೀರೀಯರ ಶರೀರ ಕಂಡು ಬಂದಿತು. ಕಾಂಚನಲಾಲನು ದುಃಖಸಾಗರದಲ್ಲಿ ಮುಳುಗಿ ಹೋದನು.

ಅಮಜದಖಾನನು ಒಬ್ಬಂಟಿಗನಾಗಿ ಆಗ್ರಾಕ್ಕೆ ತೆರಳಿ ನಡೆದುದೆಲ್ಲವನ್ನೂ

निवेदितवान् । अकबरः पश्चात्तापदग्धः अभवत् । सः काञ्चनलालम् आनाय्य तस्य क्षमां प्रार्थितवान् । परन्तु तानसेनः 'एतस्य दुरन्तस्य अहमेव कारणीभूतः' इति नितरां चिन्ताकुलः जातः । ततः सः निश्चयं कृतवान् यत् 'अहं तयोः बालिकयोः नाम शाश्वतं यथा स्यात् तथा करिष्यामि । इतः परं प्रत्येकं रागस्य अलापनसमये 'ताना-रीरी' इति आलापनं करिष्यामि' इति। सः तथैव आचरितवान् अपि ।

अतः एव अद्यापि सङ्गीतज्ञाः गीतगानात् पूर्वं 'ताना-रीरी' इति आलापनं कुर्वन्ति ।



ರಾಜಸಭೆಯಲ್ಲಿ ಹೇಳಿದನು. ಅಕ್ಬರನು ಪಶ್ಚಾತ್ತಾಪದಿಂದ ಕಾಂಚನಲಾಲನನ್ನು ಕರೆಯಿಸಿ ಅವನ ಕ್ಷಮೆ ಕೇಳಿದನು. ಆದರೆ ತಾನಸೇನನು ''ಈ ದುರಂತಕ್ಕೆ ತಾನೇ ಕಾರಣ, ಎಂದು ಚಿಂತಾಗ್ನಿಯಲ್ಲಿ ಬೇಯಲಾರಂಭಿಸಿದನು. 'ನಾನು ಆ ಇಬ್ಬರು ಬಾಲೆಯರ ಹೆಸರನ್ನು ಶಾಶ್ವತವಾಗಿ ಉಳಿಯುವಂತೆ ಮಾಡಬೇಕು. ಇನ್ನು ಮುಂದೆ ಪ್ರತೀ ರಾಗದ ಆಲಾಪನೆಯ ಸಮಯದಲ್ಲಿ 'ತಾನಾ–ರೀರೀ' ಎಂದೇ ಆಲಾಪನೆ ಮಾಡುತ್ತೇನೆ' ಎಂದು ನಿಶ್ಚಯ ಮಾಡಿ ಹಾಗೆಯೇ ಮಾಡಿದನು.

ಆದ್ದರಿಂದಲೇ ಇಂದಿಗೂ ಸಂಗೀತಜ್ಞರು ಹಾಡುವ ಮೊದಲು 'ತಾನಾ–ರೀರೀ' ಎಂದು ಆಲಾಪನೆ ಮಾಡುತ್ತಾರೆ.



# 11. प्रतीक्षा

वानान्तप्रदेशे एकस्यां गुहायां रामदासःनाम कश्चित् वृद्धः वसतिस्म। शैशवे एव तस्य मातापितरौ दिवङ्गतौ। न कोऽपि बन्धुजनः तस्य आसीत्। बाल्यकालात् सः एकस्मिन् अनाथाश्रमे इतरबालैः सह कस्याचित् महर्षेः रक्षणे प्रवृद्धः आसीत्। अतः एव वहून् सद्गुणान् प्राप्तवान् आसीत्।

परोपकारे आसक्तः सः धर्मशीलः ईश्वरभक्तश्च। धर्माचरणेन एव तस्य आयुः व्यतीतम्। पापमार्गे चलतः बहून् जानान् सः धर्ममार्गम् आनीतवान् आसीत् । अतः वार्धक्यकाले तस्य मनसि एवं विचारः आगतः - 'अहं सद्गुणसम्पन्नः एव । प्रतिदिनं मया दीनानां दुःखितानां च साहाय्यं कृतम् । मम मनसि काचिदपि पापचिन्ता कदापि न आगता । अतः मम स्वर्गप्राप्तिः भविष्यति एव । ईश्वरः मां सशरीरं स्वर्गं नेष्यति। सः मां नेतुम् कश्चित् देवदूतम् अत्र प्रेषयिष्यति' इति । इदृशेन दृढविश्वासेन सः प्रतिदिनं गुहायाः बहिः उपविश्य देवदूतस्य आगमनं प्रतीक्षमाणः आसीत् ।

अथ एकस्मिन् दिने सायङ्काले कश्चित् देवदूतः रामदासस्य पुरतः प्रत्यक्षीभूतः एव । सन्तोषेण स्तम्भितः रामदासः तम् आनन्दातिरेकेण सत्कृतवान् । 'मम प्रार्थनानुसारेण भगवान् देवदूतं प्रेषितवान् ' इति अहङ्कारः अपि तस्य मनसि आगतः।

देवदूतः एतत् सर्वं ज्ञात्वा कौतुकेन अचिन्तयत् 'रामदासः विनयशीलः। परन्तु तस्मिन् विनयेन सह अहङ्कारः अपि अस्ति ' इति ।

सः रामदासम् उक्तवान् - ''मित्र ! अहं विश्रामाय भूमिम् आगतः अस्मि । परितः प्रदेशदर्शनं कर्तुम् इच्छामि '' इति ।

# 11. ಗರ್ವಭಂಗ

ರಾಮದಾಸನು ಒಬ್ಬ ವಯೋವೃದ್ಧ. ಅವನು ಕಾಡಿನ ಒಂದು ಗುಹೆಯಲ್ಲಿ ವಾಸವಾಗಿದ್ದ. ಅವನು ಶಿಶುವಾಗಿರುವಾಗಲೇ ತನ್ನ ತಂದೆ-ತಾಯಿಯರನ್ನು ಕಳೆದುಕೊಂಡಿದ್ದ. ಒಬ್ಬ ಬಂಧುವೂ ಅವನಿಗಿರಲಿಲ್ಲ. ಆದ್ದರಿಂದ ಬಾಲ್ಯದಿಂದಲೇ ಅವನು ಒಂದು ಅನಾಥಾಶ್ರಮದಲ್ಲಿ ತನ್ನಂತಹ ಅನೇಕ ಮಕ್ಕಳೊಂದಿಗೆ ಒಬ್ಬ ಮಹರ್ಷಿಯ ರಕ್ಷಣೆಯಲ್ಲಿ ಬೆಳೆದ. ವೃದ್ಧನೂ ಆದ. ಆದ್ದರಿಂದ ತುಂಬಾ ಒಳ್ಳೆಯ ಗುಣಗಳನ್ನು ಬೆಳೆಸಿಕೊಳ್ಳಲೂ ಸಮರ್ಥನಾದ. ಪರೋಪಕಾರಿಯಾದ ಅವನು ಧರ್ಮಶೀಲನೂ, ಈಶ್ವರಭಕ್ತನೂ ಆಗಿದ್ದ. ದುಷ್ಟರನ್ನೂ, ಕಳ್ಳರನ್ನೂ ಅವನು ಒಳ್ಳೆಯವರನ್ನಾಗಿ ಮಾಡುತ್ತಿದ್ದ. ಆದ್ದರಿಂದ ಅವನಲ್ಲಿ ಗರ್ವವಿತ್ತು. 'ನಾನು ಸದ್ಗುಣಸಂಪನ್ನ. ಪ್ರತಿದಿನ ನಗರದಲ್ಲಿ ಸಂಚರಿಸಿ, ದೀನರಿಗೆ ಸಹಾಯ ಮಾಡುತ್ತೇನೆ. ನನ್ನ ಮನಸ್ಸಿನಲ್ಲಿ ಸ್ವಲ್ಪವೂ ಪಾಪ ಪ್ರಜ್ಞೆಯಿಲ್ಲ. ಸತ್ಯವನ್ನೇ ಹೇಳುತ್ತೇನೆ. ಆದ್ದರಿಂದ ನನಗೆ ನಿಜವಾಗಿಯೂ ಸ್ವರ್ಗ ಪ್ರಾಪ್ತಿಯಾಗುತ್ತದೆ. ಅದಕ್ಕೆ ನನಗೆ ದೈವಸಹಾಯ ಬೇಕು' ಎಂದು ಯೋಚಿಸುತ್ತಿದ್ದ. 'ಈಶ್ವರನು ನನಗೋಸ್ಕರ ಒಬ್ಬ ದೇವದೂತನನ್ನು ಕಳುಹಿಸುತ್ತಾನೆ'. ಅನ್ನುವ ದೃಢ ವಿಶ್ವಾಸ ಅವನಿಗಿತ್ತು. ಪ್ರತಿದಿನವೂ ಗುಹೆಯಿಂದ ಹೊರಬಂದು ದೈವದೂತನ ನಿರೀಕ್ಷೆ ಮಾಡುತ್ತಿದ್ದ.

ಒಂದು ದಿನ ಸಾಯಂಕಾಲ ಅಕಸ್ಮಾತ್ ಒಬ್ಬ ದೇವದೂತನು ರಾಮದಾಸನ ಮುಂದೆ ಪ್ರತ್ಯಕ್ಷನಾದ. ರಾಮದಾಸ ಆನಂದಾತಿರೇಕದಿಂದ ಅವನನ್ನು ಸತ್ಕರಿಸಿದ. ನನ್ನ ಪ್ರಾರ್ಥನೆಯಿಂದಲೇ ಭಗವಂತನು ದೈವದೂತನನ್ನು ನನ್ನ ಬಳಿ ಕಳುಹಿದನೆಂದು ಅಹಂಕಾರದಿಂದಲೇ ಭಗವಂತನಿಗೆ ಕೃತಜ್ಞತೆ ಸಲ್ಲಿಸಿದ. ಇದನ್ನು ತಿಳಿದ ದೇವದೂತ ಆಶ್ಚರ್ಯದಿಂದ ಹೀಗೆ ಆಲೋಚಿಸಿದ. 'ರಾಮದಾಸನು ವಿನಯಶೀಲ. ಆದರೂ

तदनुसारेण रामदासः परेद्यवि प्रभाते एव देवदूतेन सह समीपस्थं नगरं गन्तुं सज्जः अभवत् । नगरे वसतां दीनानां दरिद्राणां च सेवा तस्य नित्यक्रमः. एव आसीत् ।

यदा नगरं प्राप्तं तदा एव देवदूतः उक्तवान् - ''मित्र नितरां बुभुक्षितः अस्मि । भोजनम् आवश्यकम्'' इति ।



रामदासः तं कस्यचित् परिचितस्य धनिकस्य गृहं नीतवान् । धनिकः तौ सादरं सत्कृतवान् । शीघ्रमेव विशिष्टं पाकं सज्जीकृत्य भोजनाय आहूतवान् । भोजनपदार्थाः सुवर्णपात्रेषु रजतपात्रेषु च परिविष्टाः आसन् । तौ आनन्देन भोजनं कृतवन्तौ । भोजनानन्तरं गृहात् निर्गमनसमये देवदूतः एकं सुवर्णपात्रं स्वीकृत्य स्वस्य कोषे निक्षिप्तवान् । रामदासः एतद् दृष्ट्वा कुपितः जातः । तथापि तद् न दृष्टमिव व्यवहृतवान् ।

अनन्तरं तौ नगरे अटितवन्तौ । मध्याह्ने अटनात् पिपासितः भूत्वा

ವಿನಯದ ಹಿಂದೆ ಅಹಂಕಾರವೂ ಇದೆ.' ಎಂದು ಅರಿತ. ಅವನು ರಾಮದಾಸನನ್ನು ಕುರಿತು – ''ನಾನು ವಿಶ್ರಾಂತಿಗಾಗಿ ಭೂಮಿಗೆ ಬಂದಿದ್ದೇನೆ. ಸುತ್ತಲಿರುವ ಪ್ರದೇಶವನ್ನು ನೋಡಲು ಇಷ್ಟಪಡುತ್ತೇನೆ'' ಎಂದ. ಆ ದೇವದೂತನ ಇಷ್ಟದಂತೆ ಮರುದಿನ ಬೆಳಗ್ಗೆ ರಾಮದಾಸನು ದೇವದೂತನೊಂದಿಗೆ ನಗರ ಸಂಚಾರಕ್ಕೆ ಸಿದ್ಧನಾದ.

ನಗರವನ್ನು ಪ್ರವೇಶಿಸುತ್ತಿದ್ದಂತೆಯೇ ದೇವದೂತನಿಗೆ ಹಸಿವೆಯಾಗಲಾರಂಭಿಸಿತು. ಆಗ ರಾಮದಾಸನು ಅವನನ್ನು ಚಿರಪರಿಚಿತನಾದ ಒಬ್ಬ ಧನಿಕನ ಮನೆಗೆ ಊಟಕ್ಕೆ ಕರೆದೊಯ್ದು. ಧನಿಕನು ಅವರಿಬ್ಬರನ್ನೂ ಸತ್ಕರಿಸಿದ. ಕ್ಷಣದಲ್ಲಿಯೇ ವಿಶಿಷ್ಟ ಭೋಜನವನ್ನು ಸಿದ್ಧಪಡಿಸಿ, ಊಟಕ್ಕೆ ಆಹ್ವಾನಿಸಿದ. ಭೋಜನ ಪದಾರ್ಥಗಳೆಲ್ಲವೂ ಚಿನ್ನ ಹಾಗೂ ಬೆಳ್ಳಿಯ ಪಾತ್ರೆಗಳಲ್ಲಿ ಇಡಲ್ಪಟ್ಟಿದ್ದವು. ಊಟ ಮುಗಿಸಿ ಮನೆಯಿಂದ ಹೊರಡುವ ಮೊದಲು ದೇವದೂತ ಒಂದು ಚಿನ್ನದ ಪಾತ್ರೆಯನ್ನು ತಾನು ತೆಗೆದುಕೊಂಡು ಗೋಪ್ಯವಾಗಿರಿಸಿದ. ರಾಮದಾಸನು ಇದನ್ನು ನೋಡಿ ಕುಪಿತನಾದ. ಆದರೂ ಮೌನವಾಗುಳಿದ.

ಮಧ್ಯಾಹ್ನ ನಗರಸಂಚಾರದಿಂದ ದೇವದೂತನಿಗೆ ಬಾಯಾರಿಕೆಯಾಗಲಾರಂಭಿಸಿತು. ಅವನು ತಣ್ಣಗಿರುವ ನೀರನ್ನು ಕುಡಿಯಲು ಇಚ್ಛಿಸಿದ. ರಾಮದಾಸನು ಅವನನ್ನು ಸಮೀಪವೇ ಇದ್ದ ಒಂದು ಮನೆಗೆ ಕರೆದೊಯ್ದು. ಆ ಮನೆಯ ಯಜಮಾನ ಒಬ್ಬ ಜಿಪುಣನಾಗಿದ್ದ. ನೀರನ್ನು ಕೇಳಿದಾಕ್ಷಣವೇ ಕುಪಿತನಾದ ಅವನು 'ನಮ್ಮ ಮನೆಯಲ್ಲಿ ನೀರು ಸ್ವಲ್ಪವೇ ಇದೆ. ಪ್ರತಿದಿನದ ಅವಶ್ಯಕತೆಗೂ ಅದು ಸಾಲುವುದಿಲ್ಲ. ಆದ್ದರಿಂದ ನಾವೇ ಬಾಯಾರಿಕೆಯಿಂದ ಬಳಲುತ್ತಿದ್ದೇವೆ' ಎಂದು ಹೇಳಿದ. ಇದನ್ನು ಕೇಳಿದ ರಾಮದಾಸನಿಗೆ ನಿರಾಸೆಯಾಯಿತು. ಆದರೂ ತುಂಬಾ ಆಗ್ರಹ ಮಾಡಿದ ನಂತರ ಆ ಯಜಮಾನ ಕೆಸರುಳ್ಳ ಎರಡು ಲೋಟಗಳಲ್ಲಿ ನೀರನ್ನು ಅವರಿಬ್ಬರಿಗೂ ಕೊಟ್ಟ. ಬಾಯಾರಿಕೆಯಿಂದ ಬಳಲಿದ ಅವರಿಬ್ಬರೂ ಅದನ್ನೇ

देवदूतः पानाय जलम् अपेक्षितवान्। तदा रामदासः तं समीपस्थम् अन्यत् गृहं नीतवान् ।

तत् गृहं कस्यचित् कृपणस्य आसीत् । तौ यदा द्वारे शब्दं कृतवन्तौ किञ्चित् विलम्बेन गृहस्वामी द्वारम् उद्घाटितवान् । सः तौ कोपेन एव पश्यन् आगमनोद्देशम् अपृच्छत् । "कृपया किञ्चित् जलं ददातु" इति रामदासस्य वचनं श्रुत्वा सः अवदत् - "मम गृहेऽपि अधिकं जलं नास्ति। अनावृष्टिकारणात् अधुना सर्वत्र जलाभावः अस्ति" इति ।

एतत् वचनं श्रुत्वा रामदासः भग्नाशः जातः । तथापि सः पुनः पुनः प्रार्थनां कृतवान् । अन्ते च सः गृहस्वामी अनिच्छया एव लघुपात्रे अल्पमात्रं जलं तयोः कृते दत्तवान् । तौ सन्तोषेण जलं पीतवन्तौ ।

ततः प्रस्थानसमये देवदूतः धनिकस्य गृहात् अपहृतं सुवर्णपात्रं कृपणस्य पात्रस्य समीपे स्थापितवान् । एतत् दृष्ट्वा रामदासः विस्मयाकुलः सन् 'किमस्ति तस्य मनसि' इति गाढं चिन्तयन् आसीत् । 'किम् एषः देवदूतः विश्वासयोग्यः?' इत्यपि सन्देहः तस्य मनसि उत्पन्नः। परन्तु सः। मौनेन स्थितवान् ।

सायङ्काले तौ गुहां प्रति प्रस्थितवन्तौ। मार्गमध्ये राजमन्दिरमिव विशालं किञ्चित् भवनं दृष्टवन्तौ। भवनस्य अन्तर्भागः दीपप्रभया प्रकाशमानः आसीत्। तत्र बहवः जनाः सङ्गीते, नाट्ये च निरताः आसन्।

तत् दृष्ट्वा देवदूतः रामदासं पृष्टवान् - "तत्कस्य गृहम्? तत्र कः विशेषः?" इति ।

रामदासः उक्तवान् - "एतत् कस्यचित् महाधनिकस्य गृहम् । सः बहुकालम् अनपत्यः आसीत्। सन्तानलाभाय तौ दम्पती बहूनि व्रतानि

ಸಂತೋಷದಿಂದ ಕುಡಿದರು. ಆ ಮನೆಯಿಂದ ಹೊರಡುವ ಮೊದಲು ದೇವದೂತನು ಧನಿಕನ ಮನೆಯಿಂದ ಅಪಹರಿಸಿದ ಚಿನ್ನವನ್ನು ಜಿಪುಣ ನೀರು ಕೊಟ್ಟ ಪಾತ್ರೆಯಲ್ಲಿ ಹಾಕಿದ. ಇದನ್ನು ನೋಡಿ ರಾಮದಾಸನು ಆಶ್ಚರ್ಯಚಕಿತನಾದ. ಆದರೂ ದೇವದೂತನನ್ನು ಏನೂ ಕೇಳಲಿಲ್ಲ. ದೇವದೂತನ ಮೇಲೆ ಸಂದೇಹವೂ ಉಂಟಾಯಿತು.

ಸಾಯಂಕಾಲದಲ್ಲಿ ಮನೆಗೆ ಬರುತ್ತಿರುವಾಗ ಮಾರ್ಗದಲ್ಲಿ ಅರಮನೆಯಂತೆ ಒಂದು ವಿಶಾಲವಾದ ಭವನವಿತ್ತು. ಒಳಗೆ ದೀಪಗಳು ಝಗಮಗಿಸುತ್ತಿದ್ದವು. ಅಲ್ಲಿ ಬಹು ಜನರು ಸಂಗೀತದಲ್ಲಿಯೂ, ನೃತ್ಯದಲ್ಲಿಯೂ, ಮಗ್ನರಾಗಿದ್ದರು. ಅಲ್ಲಿ ಏನು ನಡೆಯುತ್ತಿದೆಯೆಂದು ದೇವದೂತನು ರಾಮದಾಸನನ್ನು ಕೇಳಿದ. ರಾಮದಾಸನು ಹೇಳಿದ– 'ಈ ಭವನದಲ್ಲಿ ಧನಿಕ ದಂಪತಿಗಳು ವಾಸಿಸುತ್ತಿದ್ದಾರೆ. ಅವರಿಗೆ ಬಹುಕಾಲದವರೆಗೆ ಮಕ್ಕಳಿರಲಿಲ್ಲ. ಮಕ್ಕಳನ್ನು ಪಡೆಯಲು, ಅವರು ಪ್ರಾರ್ಥಿಸದ ದೇವರಿಲ್ಲ. ಹೋಗದ ತೀರ್ಥಕ್ಷೇತ್ರಗಳಿಲ್ಲ. ಮಾಡದ ವ್ರತಗಳಿಲ್ಲ. ಕೊನೆಗೆ ಹೋದ ವರ್ಷ ಒಬ್ಬ ಮಗ ಹುಟ್ಟಿದ. ಪ್ರಾರ್ಥನೆ ಸಫಲವಾಯಿತು. ಆ ಮಗುವಿನ ಪ್ರಥಮ ಜನ್ಮದಿನವನ್ನು ಇಂದು ಆಚರಿಸುತ್ತಿದ್ದಾರೆ. ಆದ್ದರಿಂದ ಆ ಮನೆಯಲ್ಲಿ ಇಷ್ಟೊಂದು ಸಂಭ್ರಮ' ಎಂದ. ದೇವದೂತನು 'ಹಾಗಾದರೆ ನಾವೂ ಆ ಮನೆಗೆ ಹೋಗಿ ಆ ಮಗುವಿಗೆ ಆಶೀರ್ವಾದ ಮಾಡಿ ಬರುವ ' ಎಂದು ಹೇಳಿ, ಆ ಮನೆಯಕಡೆ ಹೊರಟ.

ಮನೆಯ ಯಜಮಾನನು ಪತ್ನೀಸಮೇತನಾಗಿ ಬಂದು ಅವರಿಬ್ಬರನ್ನು ಸತ್ಕರಿಸಿದ. ನಂತರ ಮಗುವನ್ನು ನೋಡಲು ತೊಟ್ಟಿಲೆಡೆಗೆ ಹೊರಟರು. ಆ ಮನೆಯವರೆಲ್ಲರೂ ಬಹಳ ಗಡಿಬಿಡಿಯಲ್ಲಿದ್ದರು. ಕಾರ್ಯಕ್ರಮದಲ್ಲಿ ಮಗ್ನರಾದ ಅವರಾರಿಗೂ ತೊಟ್ಟಿಲಲ್ಲಿ ಮಲಗಿರುವ ಮಗುವಿನ ಕಡೆಗೆ ಲಕ್ಷ್ಯವೇ ಇರಲಿಲ್ಲ. ಇದನ್ನು ನೋಡಿದ ದೇವದೂತ ಮಗುವಿನ ಬಳಿಗೆ ಹೋಗಿ ಮಗುವಿನ ಕಂಠವನ್ನು ಒತ್ತಿ ಹಿಡಿದು

आचरितवन्तौ । अन्ते च गते वर्षे तयोः एकः पुत्रः जातः। तस्य शिशोः प्रथमं जन्मदिनम् अद्य ़आचरन्तः सन्ति'' इति ।

एवं चेत् आवाम् अपि तत्र गत्वा शिशुम् आशिषा सम्भावयावः'' इति देवदूतः अनुरोधं कृतवान्।

तदनुसारेण तौ धनिकस्य भवनं गतवन्तौ । गृहस्वामी सपत्नीकः तयोः सत्कारं कृतवान् । तदनन्तरं तौ अन्तः गत्वा दोलायां निद्रितवन्तं शिशुं दृष्टवन्तौ । अन्ये गृहजनाः सर्वे उत्सवे मग्नाः आसन् । न कश्चिदपि दोलायाः पार्श्वे आसीत् । देवदूतः आशीर्वादकरणच्छलेन शिशोः समीपं प्राप्य अन्यदर्शनं विना तस्य कण्ठं निष्पीड्य श्वासं निरुध्य शिशुं मारितवान् । रामदासः देवदूतस्य ईदृशम् अकार्यं दृष्ट्वा रोषाकुलः अभवत् । किन्तु तत्समये मौनमेव अवलम्बितवान् । ततः शीघ्रं तौ गुहां प्रति प्रस्थितौ ।

गुहां प्राप्य रामदासः कोपेन देवदूतम् अपृच्छत् - ''अहो भवान् देवदूतः अस्ति । अतः भवान् सत्पुरुषः इति मया चिन्तितम् । किन्तु कीदृशः एषः भवतः व्यवहारः? किमर्थम् एतादृशम् अन्याय्यं कृतवान्?'' इति ।

किञ्चित्कालं तूष्णीं स्थित्वा ततः देवदूतः अवदत्- ''रामदासः मया विचिन्त्य एव तथा कृतम् । तस्य कारणं श्रृणोतु - आवाभ्यां दृष्टः प्रथमः धनिकः दयालुः धर्मिष्ठश्च । किन्तु सः दुरभिमानी । अतः एव सः सुवर्ण-रजतपात्रेषु भोजनं परिवेश्य स्वीयसम्पत्तेः प्रदर्शनं कृतवान् । तस्य सुवर्णपात्रम् अपहृतं यत् तत् तस्य दण्डनाय एव । किमर्थम् ईश्वरः कतिपयजनेभ्यः अधिकां सम्पत्तिं यच्छति ? दीनानां साहाय्यं कुर्वन्तु इत्येव। न तु अहङ्कारम् अनुभवितुम् ।

द्वितीयः सः कृपणः स्वभावतः न दानशीलः तथापि अद्य भवतः

ಮಗುವನ್ನು ಸಾಯಿಸಿದನು. ರಾಮದಾಸನು ದೇವದೂತನ ಕೆಟ್ಟಬುದ್ಧಿಯನ್ನು ನೋಡಿ ತುಂಬಾ ಕುಪಿತನಾದ. ಆದರೂ ಮೌನವಾಗುಳಿದ.

ಮನೆಗೆ ಬಂದ ನಂತರ ರಾಮದಾಸನು ಕೋಪದಿಂದ ದೇವತೂತನನ್ನು ಕೇಳಿದ – 'ನೀನು ದೇವದೂತನಾಗಿದ್ದು ಸದಾಚಾರದಲ್ಲಿ ಮಗ್ನನಾಗಿರಬೇಕು. ಆದರೆ ಇಂದು ನಿನ್ನ ಕೃತ್ಯಗಳನ್ನು ನೋಡಿ, ನಿನ್ನ ದುಷ್ಟಬುದ್ಧಿಯ ಅರಿವಾಯಿತು. ನಿನ್ನ ಬುದ್ಧಿಗೆ ಧಿಕ್ಕಾರವಿರಲಿ. ಇದರ ಬಗ್ಗೆ ನ್ಯಾಯವನ್ನು ನೀನು ಒದಗಿಸುತ್ತೀಯಾ' ಎಂದ.

ದೇವದೂತ ಕೆಲವು ಕ್ಷಣ ಮೌನವಾಗುಳಿದ. ನಂತರ, 'ರಾಮದಾಸ' ಕೇಳು ನನ್ನ ಮಾತನ್ನು. ಮೊದಲನೆಯದಾಗಿ, ಧನಿಕನ ವಿಷಯ ಅವನು ದಯಾಳುವೂ, ಧರ್ಮಿಷ್ಠನೂ ಹೌದು ಆದರೂ ದುರಭಿಮಾನಿ. ಆದ್ದರಿಂದ ಚಿನ್ನ, ಬೆಳ್ಳಿಯ ಪಾತ್ರೆಗಳಲ್ಲಿ ಬಡಿಸಿ, ತನ್ನ ಸಂಪತ್ತನ್ನು ಪ್ರದರ್ಶಿಸಿದನು. ದೇವರು ನಮಗೆ ಸಂಪತ್ತನ್ನು ದೀನರಿಗೆ ಸಹಾಯ ಮಾಡಲು ಕೊಡುತ್ತಾನೆಯೇ ವಿನಾ ಅಹಂಕಾರದಿಂದ ಮೆರೆಯುವುದಕ್ಕಲ್ಲ. ಹಾಗಾಗಿ ಧನಿಕನಿಗೆ ಅದು ಶಿಕ್ಷೆ.

ಎರಡನೆಯದಾಗಿ, ಜಿಪುಣ–ಅವನು ವಸ್ತುತಃ ದಾನಶೀಲನಲ್ಲ. ಆದರೂ ಇವತ್ತು ನಿನ್ನ ಪ್ರೇರಣೆಯಿಂದ ನಮ್ಮಿಬ್ಬರಿಗೆ ನೀರನ್ನು ಕೊಟ್ಟ. ಇದರಿಂದ ಅವನಿಗೆ ದಾನ ಬುದ್ಧಿ ಬರುವುದಲ್ಲದೆ, ಒಳ್ಳೆಯ ಕೆಲಸಗಳನ್ನು ಮಾಡಿದರೆ ಪ್ರತಿಫಲ ಸಿಗುತ್ತದೆ ಎಂದು ತಿಳಿಯುತ್ತದೆ. ಆದ್ದರಿಂದ ಅವನಿಗೆ ಚಿನ್ನದ ಪಾತ್ರೆಯನ್ನು ಕೊಟ್ಟೆ.

ಮೂರನೆಯದಾಗಿ, ಧನಿಕ ದಂಪತಿಗಳು. ಮಗುವಿನ ಜನನವಾಗುವವರೆಗೂ ಅವರು ತುಂಬಾ ಒಳ್ಳೆಯ ಕೆಲಸಗಳನ್ನು ಮಾಡಿದರು. ಆದರೆ ಮಗುವು ಜನಿಸಿದಾಕ್ಷಣ ಒಂದೂ ಒಳ್ಳೆಯ ಕೆಲಸವನ್ನು ಮಾಡಲಿಲ್ಲ. ಅಷ್ಟೇ ಅಲ್ಲ. ಶಿಶುವನ್ನು ಉಪೇಕ್ಷಿಸಿ ಅಧರ್ಮದಲ್ಲಿ ನಡೆದರು. ಆದ್ದರಿಂದ ಅವರಿಗೆ ಕಠಿಣ ಶಿಕ್ಷೆಯಾಗಬೇಕಿತ್ತು. ಆದರಿಂದ

प्रेरणया जलं दत्वा पिपासितयोः आवयोः उपकारं कृतवान् । अतः तस्मै सुवर्णपात्रम् उपहाररूपेण मया दत्तम् । तेन न केवलं सः दानशीलः भविष्यति, अपि तु तेन ज्ञायते यत् सत्कर्माणि शीघ्रमेव फलदायकानि भवन्ति इति ।

अन्यौ तौ च धनिकदम्पती पुत्रलाभाय बहूनि सत्कर्माणि कृतवन्तौ इति तु सत्यम् । परन्तु पुत्रलाभानन्तरं न किञ्चित् सुकृतं कृतवन्तौ । अन्यच्च शिशुम् उपेक्षमाणौ अधर्मकार्येषु व्यापृतौ अपि । तयोः स्वभाव परिष्काराय कठिनं दण्डनं दातव्यमेव । अतः मया तथा कृतम्। आगामिकाले यदा तयोः अपत्यं भविष्यति तदा तौ अप्रमत्तौ भविष्यतः'' इति ।

रामदासः देवदूतस्य विवरणं श्रुत्वा स्वस्य मूढतां ज्ञात्वा तं क्षमां प्रार्थितवान् । देवदूतः पुनः उक्तवान् - ''इश्वरः मनुष्येण क्रियमाणं धर्मम् अधर्मं, न्याय्यम् अन्याय्यं च सर्वं जानाति। तदनुसारमेव तेभ्यः शुभाशुभ फलानि ददादि । ईश्वरस्य मानदण्डं ज्ञातुं मनुष्याः न शक्नुवन्ति । अहं भवन्तं स्वर्गं नेतुमेव आगतः। किन्तु अद्यापि भवान् चिन्तयति यत् ईश्वरस्य कर्माणि सर्वाणि मानवानुगुणानि इति । भवतः चिन्तनम् इतोऽपि अपक्वम् । अतः भवता इतोऽपि कञ्चित् कालं यावत् भूलोके एव स्थातव्यम् । तदनन्तरमेव भवान् स्वर्गम् आगन्तुम् अर्हः भविष्यति'' इति ।

एवम् उक्त्वा देवदूतः तिरोभूतः अभवत् । रामदासः देवदूतस्य पुनरागमनं प्रतीक्षमाणः तत्रैव स्थितवान् ।



ಅವರಿಗೆ ಮುಂದೆ ಮಗುವಾದರೆ, ಆ ಮಗುವನ್ನು ಚೆನ್ನಾಗಿ ನೋಡಿಕೊಳ್ಳುತ್ತಾರೆ.''

ರಾಮದಾಸನು ದೇವದೂತನ ಮಾತನ್ನು ಕೇಳಿ ತನ್ನ ಮೂರ್ಖತೆಗೆ ಕ್ಷಮೆ ಯಾಚಿಸಿದನು. ದೇವದೂತನು ಪುನಃ ಹೇಳಿದನು– 'ದೇವರ ಶಕ್ತಿಯನ್ನು ತಿಳಿಯದೇ, ಮನುಷ್ಯರು ತಮ್ಮ ಪ್ರವೃತ್ತಿಗನುಗುಣವಾಗಿ ಧರ್ಮಪರಿಪಾಲನೆಯನ್ನು ಮಾಡುತ್ತಾರೆ. ಇದು ತಪ್ಪು' ಎಂದು.



# 12. किमस्ति पेटिकायाम् ?

नीलाम्बा काचित् वृद्धा, धनिका च। तस्याः चत्वारः पुत्राः। सा स्वस्य सप्ततितमे जन्मदिने स्वीयं धनं सर्वं समानतया विभज्य पुत्रेभ्यः दत्तवती। उक्तवती च-"पुत्राः ! इतःपरम् अहं वर्षे त्रीन् मासान् यावत् भवत्सु एकैकस्यापि गृहे पर्यायक्रमेण वसिष्यामि" इति।

नीलाम्बा स्वकथनानुसारं पुत्रगृहाणि गच्छन्ती कानिचन वर्षाणि यापितवती। कालक्रमेण पुत्रगृहेषु तस्याः स्वागतं न्यूनं भवति स्म। यतः तेषां लक्ष्यं तु आसीत् धनार्जने एव। स्वकीयं धनं सर्वम् एतावता एव दत्तवती आसीत् सा। पुत्राणाम् एतादृशेन व्यवहारेण नीलाम्बा नितरां खिन्ना अभवत्।

एकदा अकस्मात् नीलाम्बा सखीं स्वर्णाम्बां दृष्टवती। दीर्घकालं यावत् तयोः मध्ये आत्मीयः वार्तालापः प्राचलत्। नीलाम्बा सखीं स्वस्य क्लेशान् सर्वान् उक्तवती। तत् श्रुत्वा स्वर्णाम्बा किञ्चित्कालं यावत् चिन्तयित्वा नीलाम्बायाः कर्णे किमपि उक्तवती। तेन नीलाम्बा सन्तुष्टा जाता।



# 12. ಪೆಟ್ಟಿಗೆಯಲ್ಲೇನಿದೆ ?

ನೀಲಿಮಾ ಒಬ್ಬ ವೃದ್ಧ ಮಹಿಳೆ ತುಂಬ ಶ್ರೀಮಂತೆ. ಅವಳಿಗೆ ನಾಲ್ಕು ಜನ ಪುತ್ರರಿದ್ದರು. ಅವಳು ತನ್ನ ಎಪ್ಪತ್ತನೇ ವಯಸ್ಸಿನಲ್ಲಿ ತನ್ನ ಆಸ್ತಿಯೆಲ್ಲವನ್ನೂ ನಾಲ್ಕು ಜನ ಮಕ್ಕಳಿಗೆ ಹಂಚಿ ಹೇಳಿದಳು. ''ಇನ್ನು ಮುಂದೆ ನಾನು ಪ್ರತಿಯೊಬ್ಬ ಮಗನ ಮನೆಯಲ್ಲೂ ಮೂರು ತಿಂಗಳು ಇರುತ್ತೇನೆ'' ಎಂದು. ಈ ರೀತಿ ಒಬ್ಬೊಬ್ಬ ಮಗನ ಮನೆಯಲ್ಲಿ ಮೂರು ತಿಂಗಳಂತೆ ಕೆಲವಷ್ಟು ವರ್ಷ ಆ ಮುದುಕಿ ಕಳೆದಳು. ಕಾಲಕ್ರಮೇಣ ಅವಳು ಮನೆಗೆ ಬಂದರೆ ಮಕ್ಕಳು ಅಸಮಾಧಾನ ವ್ಯಕ್ತಪಡಿಸಲಾರಂಭಿಸಿದರು. ಅವಳಿಗೆ ಸರಿಯಾಗಿ ಸ್ವಾಗತ ಗೌರವ ಸಿಗಲಿಲ್ಲ. ವಸ್ತುತಃ ಮಕ್ಕಳ ಜೀವನದಲ್ಲಿ ಪ್ರಥಮ ಪ್ರಾಶಸ್ತ್ಯ ಹಣ ಸಂಪಾದನೆಯಾಗಿತ್ತು. ಆಮೇಲೆ ಇನ್ನೊಬ್ಬರ ಸೇವೆ. ಇದನ್ನು ತಿಳಿದ ನೀಲಿಮಾ ತುಂಬಾ ದುಃಖಿತಳಾದಳು.

ಒಮ್ಮೆ ಅಕಸ್ಮಾತ್ ನೀಲಿಮಾಗೆ ತನ್ನ ಬಾಲ್ಯಗೆಳತಿಯಾದ ಪ್ರತಿಮಾಳ ಭೇಟಿಯಾಯ್ತು. ಅವಳು ನೀಲಿಮಾಳ ಮನೆಯ ಪಕ್ಕದಲ್ಲಿಯೇ ವಾಸವಾಗಿದ್ದಳು. ನೀಲಿಮಾ ತನ್ನ ದುಃಖವನ್ನೆಲ್ಲಾ ಪ್ರತಿಮಾಳ ಬಳಿ ಹೇಳಿಕೊಂಡಳು. ಪ್ರತಿಮಾ ಎಲ್ಲವನ್ನೂ ಕೇಳಿ ಸ್ವಲ್ಪ ಸಮಯ ಚಿಂತಿಸಿದಳು. ನಂತರ ನೀಲಿಮಾಳ ಕಿವಿಯಲ್ಲಿ ಏನೋ ಉಸುರಿದಳು. ಅದನ್ನು ಕೇಳುತ್ತಿದ್ದಂತೆಯೇ ನೀಲಿಮಾಳ ಮುಖ ಸಂತೋಷದಿಂದ ಅರಳಿತು.

ಮರುದಿನ ಸಂಜೆಯ ಸಮಯದಲ್ಲಿ ನೀಲಿಮಾ ಮಗನಿಗೆ ಹೇಳದೇ ಹೊರಗಡೆ ಹೊರಟಳು. ತಿರುಗಿ ಬರುವಾಗ ಮೈಯೆಲ್ಲಾ ಕೆಸರಾಗಿತ್ತು. ಕೈಯಲ್ಲಿ ಸುಂದರವಾದ ಪೆಟ್ಟಿಗೆಯೊಂದಿತ್ತು. ಅವಳ ಆ ಸ್ಥಿತಿಯನ್ನು ನೋಡಿ ಮಗ ಕೇಳಿದ. ''ಅಮ್ಮಾ ! ಏನಿದೆಲ್ಲಾ? ಮೈಯೆಲ್ಲಾ ಕೆಸರಾಗಿದೆ, ಎಲ್ಲಿ ಹೋಗಿದ್ದೆ? ಏನಾಯ್ತು? ಆ ಪೆಟ್ಟಿಗೆಯಲ್ಲಿ

अन्यस्मिन् दिने सायङ्काले नीलाम्बा गृहात् बहिः गतवती। कुत्र गच्छामि इति पुत्रम् अनुक्त्वा एव सा गतवती आसीत्। प्रत्यागमनसमये तस्याः हस्ते एका पेटिका आसीत्। तया घृतानि वस्त्राणि च मलिनानि आसन्।

हस्ते पेटिकां गृहीतवतीं मातरं दृष्ट्वा पुत्रः पृष्टवान्- "अम्ब ! किम् एतत्? भवत्याः वस्त्राणि मलिनानि, हस्ते एका पेटिका अस्ति। कुत्र लब्धा एषा पेटिका ? तस्याः अन्तः किम् अस्ति ? कुत्र गतवती आसीत् भवती ?" इति।

"वत्स, एषा पेटिका भूमेः अन्तः मया एव निक्षिप्ता आसीत्। एतस्यां बहूनि अमूल्यवस्तूनि सन्ति। सर्वं भवताम् अभ्युदयाय एव। किन्तु मम मरणानन्तरं भवन्तः एतेषां वस्तूनाम् उपयोगं कर्तुम् अर्हन्ति" इति उक्त्वा नीलाम्बा अन्तः गतवती। एतत् श्रुत्वा आश्चर्यचकितः सः पुत्रः स्वभ्रातॄन् सर्वान् एतं विषयम् उक्तवान्। सर्वे भ्रातरः तस्मिन् विश्वसितवन्तः, चिन्तितवन्तः च-'एतादृश्यः अन्याः अपि पेटिकाः भूमेः अन्तः तया निक्षिप्ताः स्युः' इति।

एतदनन्तरं तु पुत्राः मातरं सम्यक् पालयन्ति स्म। नीलाम्बा पुत्राणां सदाचारेण सन्तुष्टा सती सन्तोषेण कालं यापितवती।

पुनः कानिचन वर्षाणि अतीतानि। एकस्मिन् दिने रात्रौ नीलाम्वा दिवङ्गता।

नीलाम्बायाः अन्त्यकर्मसु साहाय्यं कर्तुं तस्याः सखी स्वर्णाम्वा आगता आसीत्। सा गमनसमये नीलाम्बायाः पुत्रान् आहूय एकां कुञ्चिकां दत्त्वा उक्तवती - "सा माम् उक्तवती आसीत् 'मरणानन्तरम् एषा कुञ्चिका

ಏನಿದೆ ?'' ಎಂದು. ಆಗ ನೀಲಿಮಾ ''ಮಗು, ಈ ಪೆಟ್ಟಿಗೆ ಭೂಮಿಯಲ್ಲಿ ಹುಗಿಯಲ್ಪಟ್ಟಿತ್ತು, ಇದರಲ್ಲಿ ಬಹಳ ಬೆಲೆ ಬಾಳುವ ವಸ್ತುಗಳಿವೆ. ಎಲ್ಲವೂ ನಿಮಗಾಗಿಯೇ. ಆದರೆ ನನ್ನ ಮರಣಾನಂತರವಷ್ಟೇ ನಿಮಗೆ ಇವುಗಳ ಉಪಯೋಗ ತಿಳಿಯುತ್ತದೆ'' ಎಂದಳು.

ಮಗನಿಗೆ ಇದನ್ನು ಕೇಳಿ ತುಂಬಾ ಸಂತೋಷವಾಯ್ತು. ಅವನು ಈ ವಿಷಯವನ್ನು ಉಳಿದವರಿಗೂ ಹೇಳಿದ. ಎಲ್ಲ ಸೇರಿ ಅಮ್ಮನ ಬಳಿಯಲ್ಲಿ ಇನ್ನೂ ಇಂತಹ ಹಲವಾರು ಪೆಟ್ಟಿಗೆಗಳಿರಬಹುದೆಂದು ಭಾವಿಸಿದರು. ಅಲ್ಲಿಂದ ಮುಂದೆ ಪ್ರತಿಯೊಬ್ಬರೂ ತಾಯಿಯನ್ನು ಪ್ರೀತಿಯಿಂದ ಗೌರವದಿಂದ ನೋಡಲಾರಂಭಿಸಿದರು, ಉಪಚರಿಸಲಾರಂಭಿಸಿದರು.

ಹೀಗೆಯೇ ಕೆಲವು ವರ್ಷಗಳು ಗತಿಸಿದವು. ನೀಲಿಮಾ ಮಕ್ಕಳ ವ್ಯವಹಾರದಿಂದ ತುಂಬಾ ಸುಖವಾಗಿ ಸಂತೋಷದಿಂದ ಜೀವಿಸುತ್ತಿದ್ದಳು. ಒಂದು ದಿನ ರಾತ್ರಿ ಮಲಗಿದ ನೀಲಿಮಾ ಮೇಲೇಳಲೇ ಇಲ್ಲ. ಅವಳ ಅಂತ್ಯಕ್ರಿಯೆಯ ಸಮಯದಲ್ಲಿ ಸಹಾಯ ಮಾಡಲು ಬಾಲ್ಯಗೆಳತಿ ಪ್ರತಿಮಾ ಬಂದಳು. ಅವಳು ಕೆಲಸವನ್ನೆಲ್ಲಾ ಮುಗಿಸಿ ತಿರುಗಿ ಬರುವಾಗ ನೀಲಿಮಾ ತನ್ನ ಬಳಿ ಕೊಟ್ಟಿದ್ದ ಪೆಟ್ಟಿಗೆಯ ಬೀಗದ ಕೀಯನ್ನು ಮಕ್ಕಳಿಗೆ ಕೊಟ್ಟಳು. ಅನುಕ್ಷಣವೇ ಮಕ್ಕಳೆಲ್ಲರೂ ಸಂತೋಷದಿಂದ ತಾಯಿಯ ಕೋಣೆಗೆ ಲಗ್ಗೆ ಹಾಕಿದರು. ಪೆಟ್ಟಿಗೆಯಲ್ಲಿ ಏನಿದೆಯೆಂದು ನೋಡುವ ಕುತೂಹಲ ಎಲ್ಲರಿಗೂ. ಪೆಟ್ಟಿಗೆಯ ಬಾಗಿಲನ್ನು ತೆರೆದು ಅತೀವ ಉತ್ಸಾಹದಿಂದ ನೋಡುವ ಕುತೂಹಲ ಎಲ್ಲರಿಗೂ, ಪೆಟ್ಟಿಗೆಯ ಬಾಗಿಲನ್ನು ತರೆದು ಅತೀವ ಉತ್ಸಾಹದಿಂದ ಒಳಗೇನಿದೆಯೆಂದು ನೋಡುತ್ತಾರೆ, ಅಯ್ಯೋ !, ಒಳಗಡೆ ಬರೇ ಕಲ್ಲಿನ ಸಣ್ಣ ಸಣ್ಣ ಚೂರುಗಳು. ಮಕ್ಕಳೆಲ್ಲರೂ ನಿರಾಸೆಯಿಂದ ದುಃಖಿತರಾದರು. ಏನು ಮಾಡಬೇಕೆಂದೇ ತೋಚದೆ ಸಿಟ್ಟಿನಿಂದ ಪೆಟ್ಟಿಗೆಯನ್ನೆಲ್ಲಾ ಜಾಲಾಡಿಸಿದರು. ತಳದಲ್ಲಿ ನೀಲಿಮಾ ಬರೆದ ಒಂದು ಪತ್ರವಿತ್ತು. ಅದರಲ್ಲಿ ''ಮಕ್ಕಳೇ ನಿಮಗೆಲ್ಲಾ ತುಂಬಾ

पुत्रेभ्यः दातव्या' इति''।

नीलाम्बायाः पुत्राः अनुक्षणं प्रकोष्ठं गत्वा तां पेटिकाम् उद्घाटितवन्तः। अहो...., पेटिकायां शिलाखण्डाः एव पूरिताः सन्ति! तत् दृष्ट्वा सर्वे पुत्राः निराशतया स्तम्भिताः अभवन्। ते शिलाखण्डान् निष्कास्य पुनः पुनः परिशीलितवन्तः। पेटिकायाम् अमूल्यं वस्तु किमपि न आसीत्। परन्तु एका चीटिका आसीत्। चीटिकायां लिखितम् आसीत् - ''पुत्राः ! एतद् दृष्ट्वा भवतां निराशा भवति इति मन्ये। एतादृशः कपटोपायः मया आचरितः इति अहं दुःखिता अस्ति। परन्तु भवतां बोधनाय एव मया एवं कृतम्। जीवने धनम् आवश्यकमेव। किन्तु धनमेव जीवनं न'' इति।

तत् पठित्वा पुत्राः लज्जिताः अभवन्।



ನಿರಾಸೆಯಾಗಿರಬಹುದು. ಈ ರೀತಿಯ ಕಪಟೋಪಾಯವನ್ನು ಆಶ್ರಯಿಸಿ ಜೀವನ ಮಾಡಬೇಕಾಗಿದ್ದಕ್ಕೆ ನನಗೆ ತುಂಬಾ ದುಃಖವಿದೆ. ಆದರೆ ತನ್ನ ಮಕ್ಕಳಿಂದ ಒಳ್ಳೆಯ ರೀತಿಯಲ್ಲಿ ಸೇವೆ ಪಡೆಯಲು ಈ ಉಪಾಯ ನನಗೆ ಅನಿವಾರ್ಯವಾಯ್ತು. ನನ್ನನ್ನು ಕ್ಷಮಿಸಿ ಕೊನೆಯಲ್ಲಿ ಒಂದು ಕಿವಿ ಮಾತು– ''ಜೀವನ ಮಾಡಲು ಹಣದ ಅಗತ್ಯವಿದೆ. ಆದರೆ ಜೀವನದಲ್ಲಿ ಹಣವೇ ಮುಖ್ಯವಲ್ಲ. ಅದು ನಶ್ವರ. ಪ್ರೀತಿಯು ಮುಖ್ಯ. ನಿಮ್ಮ ಮಕ್ಕಳು ನಿಮ್ಮನ್ನು ಪ್ರೀತಿಯಿಂದ ನೋಡಿಕೊಳ್ಳುವಂತೆ ಅವರನ್ನು ಬೆಳೆಸಿ'' ಎಂದಿತ್ತು.

ಇದನ್ನು ಓದಿದ ಮಕ್ಕಳು ಲಜ್ಜಿತರಾದರು. ಅಂದೇ ಪ್ರತಿಜ್ಞೆಗೈದರು – ತಾಯಿಯ ಆಸೆಯಂತೆಯೇ ಮಕ್ಕಳನ್ನು ಬೆಳೆಸುತ್ತೇವೆ ಎಂದು.

